GUBBI MALLANARYA'S

# BHAVA CHINTA RATNAM

(A SHATPADI WORK)

ಗುಬ್ಬಿ ಮಲ್ಲಣಾರ್ಯ ವಿರಚಿತಂ

# ಭಾವಚಿಂತಾರತ್ನಂ

ಟಿಪ್ಪಣ್ಯಾಂ

Edited with Notes by

A. RAMANUJA IYENGAR



Price: 10 Annas.

G.T.A. Press, Mysore.

ಗುಬ್ಬಿ ಮಲ್ಲಣಾರ್ಯ ವಿರಚಿತಂ

# ಭಾವಚಿಂತಾರತ್ನಂ

ಪರಿಷ್ಕೃತ ದ್ವಿತೀಯ ಮುದ್ರಣಂ

ಕರ್ಣಾಟಕ ಕಾವ್ಯಮಂಜರಿ ಮತ್ತು ಕಾವ್ಯಕಲಾನಿಧಿಯ

ಪ್ರವರ್ತಕರೂ ಪ್ರೊಪ್ರೈಟರೂ ಆದ

**ಮಂ॥ ಅ॥ ರಾಮಾನುಜಯ್ಯಂಗಾರ್ಯರಿಂದ**

ಪರಿಶೋಧಿತವಾಗಿ,

ಮೈಸೂರು

ಜಿ.ಟಿ.ಎ. ಪ್ರೆಸ್ಸಿನಲ್ಲಿ ಮುದ್ರಿತವಾಗಿ ಪ್ರಕಟಿಸಲ್ಪಟ್ಟಿದೆ,

೧೯೩೩

# ಉಪೋದ್ಘಾತ

ಶೈವರಲ್ಲಿ ಪ್ರಸಿದ್ಧವಾದ ಭಾವಚಿಂತಾರತ್ನವೆಂಬ ಈ ಗ್ರಂಥವನ್ನು ಕೀರ್ತಿಶೇಷರಾದ ಎಸ್. ಜಿ. ನರಸಿಂಹಾಚಾರ್ಯರೂ ನಾನೂ ಕರ್ಣಾಟಕ ಕಾವ್ಯಮಂಜರಿ ಮಾಸಪತ್ರಿಕೆಯಲ್ಲಿ ಕ್ರಿ. ಶ. 1901 ರಲ್ಲಿ ಮೊದಲು ಮುದ್ರಿಸಿದೆವು. ಆಗ ಕವಿಯ ವಿಷಯವಾಗಿ ತಿಳಿದಷ್ಟು ಸಂಗತಿಯನ್ನು ಕುರಿತು ಒಂದು ಪೀಠಿಕೆಯನ್ನು ಬರೆದಿದ್ದೆವು. ಆ ಪೀಠಿಕೆಯನ್ನು ಈ ದ್ವಿತೀಯ ಮುದ್ರಣದಲ್ಲಿಯೂ ಮುದ್ರಿಸಿ ಸೇರಿಸಿದ್ದೇನೆ. ಕವಿಚರಿತ್ರಕಾರರು ಈತನ ವಿಚಾರವಾಗಿ ಇನ್ನೂ ಸ್ವಲ್ಪ ಹೆಚ್ಚು ಸಂಗತಿಯನ್ನು ತಿಳಿಸುತ್ತಾರೆ. ಈತನು ವೀರಶೈವಾಮೃತಪುರಾಣವೆಂಬ ಮತ್ತೊಂದು ಗ್ರಂಥವನ್ನು ಬರೆದಿರುವುದಾಗಿ ತಿಳಿಸುತ್ತಾರೆ. ಷಡಕ್ಷರಿದೇವನು ರಾಜಶೇಖರವಿಲಾಸದಲ್ಲಿ (ಕ್ರಿ. ಶ. ೧೬೫೭) ಈ ಕವಿಯ ಭಾವಚಿಂತಾರತ್ನವನ್ನು ಸ್ಮರಿಸಿರುವುದರಿಂದಲೂ, ಈ ಗ್ರಂಥರಚನೆಯ ಕಾಲವನ್ನು ತಿಳಿಸುವ ೯ನೆಯ ಸಂಧಿಯ ೬೦ನೆಯ ಪದ್ಯದಲ್ಲಿರುವ ''ಬಾಣಗುಣವಾರ್ಧಿವಿಧುಸಂದ ಶಕ'' ಎಂಬುದಕ್ಕೆ ಶಕ ೧೪೩೫ ಎಂಬ ಅರ್ಥವು ಸಮಂಜಸವಾಗಿರುವುದರಿಂದಲೂ, ಈ ಗ್ರಂಥವು ಕ್ರಿ. ಶ. ೧೫೧೩ರಲ್ಲಿ ರಚಿತವಾಗಿರಬೇಕೆಂದು ನಿಸ್ಸಂದೇಹವಾಗಿ ಹೇಳಬಹುದು. ಅದೇ ಪದ್ಯದಲ್ಲಿ ಕವಿಯು ತಾನು ಯಾರು, ಯಾರಿಗೋಸ್ಕರ, ಯಾವ ವರ್ಷ, ಯಾವ ತಿಂಗಳು, ಯಾವ ತಿಥಿ, ಯಾವ ನಕ್ಷತ್ರದಲ್ಲಿ ಇದನ್ನು ರಚಿಸಿದನೆಂಬುದನ್ನು ತಿಳಿಸುತ್ತಾನೆ.

ಈ ಗ್ರಂಥದಲ್ಲಿ ಪ್ರತ್ಯಧ್ಯಾಯದ ಸೂಚನೆಯ ಪದ್ಯಾರ್ಥವನ್ನೂ ಪ್ರಶಸ್ತಿಪರವಾದ ಅಂತ್ಯಪದ್ಯವನ್ನೂ ಬಿಟ್ಟರೆ ೩೬೫ ಪದ್ಯಗಳಾಗುತ್ತವೆ. ಇದೇ ಈ ಕವಿಯು ದಿನಕ್ಕೆ ಒಂದು ಪದ್ಯದ ಮೇರೆ ಬರೆದು ಈ ಗ್ರಂಥವನ್ನು ಒಂದು ವರ್ಷದಲ್ಲಿ ಮುಗಿಸಿದನೆಂಬ ಪ್ರವಾದಕ್ಕೆ ಆಧಾರವಾಗಿರಬಹುದು. ಆದುದರಿಂದ ೩೬೦ ಎನ್ನುವ ಕಡೆ ೩೬೫ ಎಂದಿರಬೇಕು.

ಮಂ. ಆ. ರಾ.

# ಪೀಠಿಕೆ.

ಈ ಕವಿಯ ತಂದೆಗೆ ಗುರುಭಕ್ತನೆಂದು (ಸಂ. ೧. ೧೫) ಹೆಸರು; ಪಿತಾಮಹನಿಗೆ ಗುಬ್ಬಿಮಲ್ಲಣಾರ್ಯನೆಂದು ಹೆಸರು. ಆತನು "ವಾತೂಲ ತಂತ್ರಕ್ಕೆ ಟೀಕು" ಬರೆದಂತೆಯೂ, "ಆಗಮಗ್ರಂಥವಚನದಿಂ ಗಣಭಾಷ್ಯರತ್ನಮಾಲೆ" ಯನ್ನು ರಚಿಸಿದಂತೆಯೂ (ಸ. ೧. ೧೩) ತಿಳಿಯಬರುತ್ತದೆ. ಈ ಕವಿಯ ನಿಜವಾದ ಹೆಸರು "ಬಸವಪೌರಾಣದುರುಮಲ್ಲಣಾರ್ಯ" ಎಂಬುದು; ಆದರೂ ಪಿತಾಮಹನ ಹೆಸರಿನಿಂದಲೆ ಕರೆಯಲ್ಪಡುತ್ತಿರುವನು. ಷಡಕ್ಷರಿದೇವನು ತನ್ನ "ರಾಜಶೇಖರವಿಲಾಸ"ದಲ್ಲಿ—"ಆ ಕಥೆಯಂ ಕೃತಾರ್ಥಸುಮನೋಲತೆಯಂ ವರಮಲ್ಲಣಾರ್ಯರು । ರ್ವೀಕವಿರಾಜರಾಜಿನುತಮಾಗಿರೆ ವರ್ಣಕದಿಂದೆ ಭಾವರ॥ ತ್ನಾಕರಮಾಗಿ ಪೇಳ್ದಿರ್" ಎಂದು ಸ್ತುತಿಸಿರುವುದರಿಂದ, ಈ ಕವಿಯು ಷಡಕ್ಷರಿದೇವನಿಗಿಂತ ಹಿಂದಿನವನೆಂದು ವ್ಯಕ್ತವಾಗುತ್ತದೆ. ಮೇ॥ ರೈಸ್ ಸಾಹೇಬರವರು ಸುಮಾರು ಕ್ರಿ. ಶ. ೧೩೭೯ರಲ್ಲಿ ಇದ್ದವನೆಂದು ಅಭಿಪ್ರಾಯಪಡುತ್ತಾರೆ.

ಕವಿಯು ತನ್ನ ಭಕ್ತನಾದ ಚೇರಮಾಂಕನ ಪ್ರಾರ್ಥನೆಯ ಮೇರೆ ಈ ಗ್ರಂಥವನ್ನು ಬರೆದುದಾಗಿ ಹೇಳುತ್ತಾನೆ. ಈ ಗ್ರಂಥದ ಕಥೆಯನ್ನು "ತಿರುಜ್ಞಾನಿಸಂಬಂಧಿಯು" "ಕುಲಚ್ಚರಿಯಗೆ" ಪ್ರಣವ ಪಂಚಾಕ್ಷರೀಮಹಿಮೋಪದೇಶಾರ್ಥವಾಗಿ ದ್ರಾವಿಡಭಾಷೆಯಲ್ಲಿ ಹೇಳಿದಂತೆಯೂ, ಅದನ್ನು ತಾನು ಕನ್ನಡಿಸಿದಂತೆಯೂ ಸಂಧಿ ೧. ೨೧ನೆಯ ಪದ್ಯದಲ್ಲಿ ಹೇಳುತ್ತಾನೆ. ಈ ಗ್ರಂಥಕ್ಕೆ "ಭಾವಚಿಂತಾರತ್ನ"ವೆಂದು ಹೆಸರು ಬರುವುದಕ್ಕೆ "ಕೃತಿಯ ಪಲ್ಲವಿ ತೊಡಗಿ ಪೂರ್ಣಮಪ್ಪನ್ನಮೀ । ಕೃತಿಯೊಳುತ್ಪ್ರೇಕ್ಷೆಯಿಲ್ಲದುದೊಂದು ಪದವಿಲ್ಲ। ಕೃತಿಗದುನಿಮಿತ್ತದಿಂ ಭಾವಚಿಂತಾರತ್ನವೆಂಬ ಪೆಸರೀಕಾವ್ಯಕೆ॥" ಎಂದು ಕಾರಣವನ್ನು ತಿಳಿಸುತ್ತಾನೆ. ಗ್ರಂಥಾದಿಯಲ್ಲಿ ಭೋಗಮಲ್ಲೇಶನನ್ನು ಸ್ತುತಿಸಿದ್ದಾನೆ. ಬಳಿಕ ಈಶ್ವರನನ್ನೂ, ಸಿದ್ಧಮಲ್ಲಿಕಾರ್ಜುನ ಗುರುವನ್ನೂ, ನಂದೀಶ ಭೃಂಗೀಶ ವೀರೇಶರನ್ನೂ, ಅಲ್ಲಮಪ್ರಭು ಬಸವ ಚೆನ್ನಬಸವರನ್ನೂ, ಶಿವಲೆಂಕಮಂಚಣ್ಣಪಂಡಿತ ಶ್ರೀಪತಿಪಂಡಿತ ಮಲ್ಲಿಕಾರ್ಜುನಪಂಡಿತರೆಂಬ ಪಂಡಿತತ್ರಯವನ್ನೂ, ಸಿದ್ಧರಾಮ ಪಾಲ್ಕುರಿಕೆ ಸೋಮರನ್ನೂ, ಬಳಿಕ ಕಾಳಿದಾಸ ಬಾಣ ಮಯೂರರೆಂಬ ಸಂಸ್ಕೃತ

ಕವಿಗಳನ್ನೂ, ಷಡ್ಗುರಸ ಹರಿಹರರೆಂಬ ಕರ್ಣಾಟಕ ಕವಿಗಳನ್ನೂ ಸ್ಮರಿಸುತ್ತಾನೆ. ಅನಂತರ ಗೂಳೂರಶಾಂತಿದೇವ, ಗುಮ್ಮಳಾಪುರದ ಶಾಂತೀಶಗುರು, ನಾಗವಲ್ಲಿಯ ಶಿವಪೂಜೆಯಾರ್ಯ, ಚಿಕ್ಕಬಸವರೆಂಬ ಗುರುಗಳನ್ನು ಸ್ಮರಿಸುತ್ತಾನೆ. ಈತನ ಗುರು ಸಿದ್ಧಮಲ್ಲೇಶ. ಈ ಗ್ರಂಥದ ಕಥಾಗರ್ಭವನ್ನು—

"ತರುಣಿ ಪೊರೆದಣುಗನಶ್ವದ ಖುರದ ಹತಿಯಿಂದ । ಹರಭಕ್ತನಱಿಯಲದ ಕೇಳ್ದು ಕೊಲೆಯುಂದವಂ। ಪರಿಕಿಸಿ ನಿಜಾತ್ಮಜಂ ಮೊದಲಱಿವಿಗೆಂದ ನುಡಿಗಾಮುದ್ದುಮಗನ ತಲೆಯು। ಅಱಿಸುವೆಡೆಯೊಳು ಮತ್ತೆ ಭಕ್ತವಧೆಯೆಂದು ನಿಜ। ಶಿರದೊಡನೆ ತಱಿದೆಂಟು ತಲೆಗಳಂ ಪಡೆದು ಶಂ। ಕರನೂರ್ಗೆ ಪೋದ ಸತ್ಯೇಂದ್ರ ಚೋಳನ ಕಥೆಯನಿದ ಬೆಳಸಿ ಕೃತಿಮಾಡಿಪ್ಪೆನು" (ಸಂ. ೧. ೨೨) ಎಂಬ ಪದ್ಯದಲ್ಲಿ ಹೇಳುತ್ತಾನೆ. ಮತ್ತು ಪ್ರತಿ ಆಶ್ವಾಸದ ಕೊನೆಯಲ್ಲಿ,

"ಇದು ಸಕಲಭಕ್ತಪದಪಂಕೇಜರೇಣುವು। ಸ್ತದ ಮಲ್ಲಣಾರ್ಯನಾಚೇರಮಾಂಕಂಗೆ ಬೆಸ। ಸಿದ ಭಕ್ತಸತ್ಯೇಂದ್ರಚೋಳಕೃತಿ ಭಾವಚಿಂತಾರತ್ನವಮಲಕರ್ಣ॥ ಹೃದಯಮಸ್ತಕವದನ ಸರ್ವಾಂಗಸೌಖ್ಯಕಾ। ಸ್ಪದವಖಿಳಸುಜನರ್ಗೆ ಪಂಚಾಕ್ಷರಿಯ ಮಹ। ತ್ವದ ಬೋಧೆಯೆಂದೋದಿದೊಡೆ ಕೇಳಿದರಿಗಿಷ್ಟಸಿದ್ಧಿ ಸರ್ವರಿಗಪ್ಪುದು॥"

ಎಂಬ ಪದ್ಯವನ್ನು ಬರೆಯುತ್ತಾನೆ. ಈ ಗ್ರಂಥದಲ್ಲಿ ೩೬೦ ವಾರ್ಧಿಕ ಷಟ್ಪದಿಗಳಿವೆ. ಕವಿಯು ಪ್ರತಿ ದಿನವೂ ಒಂದೊಂದು ಪದ್ಯವನ್ನು ವಿರಚಿಸಿ ಶಿವಪೂಜಾಕಾಲದಲ್ಲಿ ಶಿವನಿಗೆ ಸಮರ್ಪಣೆ ಮಾಡುತ್ತ ಒಂದು ವರ್ಷಕಾಲ ನಡೆಸುತ್ತ ಬಂದುದರಿಂದ ಈ ಗ್ರಂಥದಲ್ಲಿ ೩೬೦ ಪದ್ಯಗಳಾದುವೆಂದು ಒಂದು ಪ್ರವಾದವುಂಟು.

———

ಗುಬ್ಬಿ ಮಲ್ಲಣಾರ್ಯ ವಿರಚಿತಂ

# ಭಾವಚಿಂತಾರತ್ನಂ

(ವಾರ್ಧಿಕಷಟ್ಪದಿ)

---

ಸೂಚನೆ ॥ ಶ್ರೀವಿಮಲಗುಹನವುರಗುಂಡವುಲ್ಲೇಶ್ವರನ ।
ಸೇವಾನಿಮಿತ್ತದಿಂದಿಳೆಯೊಳೊಗೆದಾಪ್ರಣವ ।
ಜೀವಪಂಚಾಕ್ಷರಿಯ ಬಿತ್ತರಿಸಿದಂ ಕುಲಚ್ಚಾರಿಯುಗಾನಂದದಿಂದ ॥

ಶ್ರೀಗುರುಸದಾನಂದ ನಾಗೀಶವರದ ತುಹಿ ।
ನಾಗಜಾರ್ಧಾಂಗ ಮಹಿಮಾಗರಿಮಚರಣ ಸಕ ।
ಲಾಗಮಸ್ತುತ್ಯ ಶಶಿಭಾಗಭೂಷಿತಮುಕುಟ ಯೋಗಿಜನಹೃನ್ನಿವಾಸ ॥
ರಾಗಾದಿರಹಿತ ಸುಖಸಾಗರನಲಾ ನೀನು ।
ಭೋಗಮಲ್ಲೇಶ ಬಿಡದೀಗಳೆಮ್ಮಯ ಕೃತಿಯ ।
ಭೂಗಗನದಿಗ್ಭರಿತಮಾಗಿ ಪಸರಿಸುವಿನಂ ಸಾಗಿಸುವುದಚ್ಚುಱಿಂದೆ ॥ ೧

ತೊಡೆಯನೇಱಿದಳಂಬಿಕಾಮಾತೆ ವ್ಯಾಜದಿಂ ।
ಜಡವನಿತೆ ಶಿರವನಡರಲ್ ಮಾಹ ತಡೆಯೆ ತಲೆ ।
ಜಡೆಗಟ್ಟಲುರಿಯೆ ಪಣೆಗಣ್ಣೆಡೆದ ಕಣ್ ಕಂದೆ ಬಲಗಣ್ಣೊಳಡರೆ ಕೆಂಪು ॥
ಬಿಡದೆ ಮೆಯ್ಯೆಲುದೋಱಿ ಮಲಿನ ಕಂಠದೊಳುಣ್ಮೆ ।
ತಡೆಯದಂಗದ ಸಮ್ಮಮೊಣಗಿತೆಮ್ಮಯ್ಯಂಗೆ ।
ಯೊಡೆಯರಿಲ್ಲೆಂದು ಬಾಯಾರ್ವ ಗುಹನಂ ನೋಡಿ ನಗುವ ಶಿವ ರಕ್ಷಿಸೆಮ್ಮ ॥ ೨

ಪರುಷಣಂಗೆಯ್ಯೆ ದೀಕ್ಷಾರ್ಥಿಗಳನಲ್ಲಿ ಚಿ ।
ತ್ತರುಣಿ ವಿಸ್ಫುರಿಸೆ ಹಸ್ತಾಬ್ಜವಿಕಸನಮಾಗೆ ।
ಪರತರಬ್ರಹ್ಮಪುರುಷನ ಪೆತ್ತು ಸದ್ಭಕ್ತಿಭಾರತಿಯನಲ್ಲಿ ಪಡೆದು ॥
ಕರುಣದಿಂದಿರ್ವರ್ಗೆ ಪರಿಣಯಂಗೆಯ್ದು ಭಾ ।
ಸುರವರ್ಯನೇಲೇಶಕೇತಣಾರ್ಯನೊಲೆಸೆವ ।
ವರಸಿದ್ಧಮಲ್ಲಿಕಾರ್ಜುನಗುರುವೆ ಜಯ ಪರಾತ್ಪರನೆ ಮತ್ಕಲ್ಪತರುವೆ ॥ ೩

ನೆಟ್ಟನಾಥರ್ಮಾರ್ಥಕಾಮಮೋಕ್ಷಂಗಳಂ ।
ಮೆಟ್ಟಿ ಹರ್ಯಜರಿಂದ್ರಪದವನೊದೆದಾವಗಂ ।
ನಿಟ್ಟವಧಿ ವಿಧಿಗಳ ಶಿರೋಮಧ್ಯದೊಳ್ ಸಿಂದು ಬಿನದಿಸುತ್ತಿಟ್ರಿಜಿಂದೆ ॥
ಪಟ್ಟಿರ್ಪ ನಾಲ್ಕು ಮೂಜಿಶರಡಡಿಗಳಿಂದಲಳ ।
ವಟ್ಟ ನಂದೀಶ ಭೃಂಗೀಶ ವೀರೇಶರೆ ।
ಬ್ಬಟ್ಟಗೀ ಕೃತಿಯ ನವರಸದ ವಿಘ್ನವ ಮತಿಯ ಕೊಟ್ಟು ರಕ್ಷಿಪುದಟ್ಠಿಯಿಂ ॥ ೪

ನಿರುಪಮನಿರಂಗನೆನಿಪಲ್ಲಮಪ್ರಭುರಾಯ ।
ಹರಭಕ್ತರೇ ಸಂಗಮೇಶರೆಂದೆಂಬ ಬಸ ।
ವರಸ ವಿಮಲಪ್ರಸಾದಾಂಗಿಯಹ ಚೆನ್ನಬಸವೇಶರಿವರಂಘ್ರಿಕಮಲ ॥
ಪರಮಷಟ್ಸ್ಥಲವಾದುವವ ನುತಿಸುವೆಂ ನುತಿಸಿ ।
ನಿರುತಷಟ್ಪದಿಯಾದುವಿವು ಕಮಲಜಾಂಡದೊಳ್ ।
ಪರಿಕಲಿಸಿ ಪಸರಿಸುಗೆ ಚರಗುರುಶಿವಾರ್ಚಕರ ಮನಕುತ್ಸವಂ ಬೀಱುತೆ ॥ ೫

ಹರಿಯುನಭವಂಗೆ ವಂದನೆಗೆಯಿಸಿ ಶಿಖಿಯುನಂ ।
ಬರದಲ್ಲಿ ಕಟ್ಟಿಯೂರ್ಧ್ವಾಕ್ಷಿಗಳ ಪಡೆದು ನಿ ।
ಷ್ಕರವಕ್ರಮಂದತೀವ್ರದ ದುರ್ಗುಣಗಳ ವೈಷ್ಣವ ವಿಪ್ರ ಜೈನರೆಂಬ ॥
ವರವಾತಪಿತ್ತದುಶ್ಶ್ಲೇಷ್ಮಮಂ ಕಿಡಿಸಿ ಶಂ ।
ಕರಲೆಂಕಮಂಚಣ್ಣ ಶ್ರೀಪತೀಶ್ವರದೇವ ।
ನುರುಮಲ್ಲಿಕಾರ್ಜುನಂ ಪಂಡಿತತ್ರಯವಾದರೆಮ್ಮ ಭವರೋಗಗಳಿಗೆ ॥ ೬

ಧರೆಯ ರಕ್ಷಿಸೆ ವೃದ್ಧಸುಗ್ಗಲೆಯೊಳುದಿಸಿ ಸಿರಿ ।
ಗಿರಿಯ ಲಿಂಗಂಗಳಂ ಸೊನ್ನಲಗೆಯೊಳ್ ನಿಲಿಸಿ ।
ಕರುಣದಿಂ ಗಂಧರ್ವರಂ ಸಲಹಿ ವಿಷದಿವ್ಯಗಳ ಗೆಲಿದಥೋದ್ದೈತ್ಯೆಯಾ ॥
ಪೊರೆದು ಖರ್ಪರನ ಗೆಲಿದಿಱಿದು ಸಿಡಿಲಂ ತೆಗೆದು ।
ನರಕಿಗಳನಿತ್ಯಾದಿಬಹುಮಹಿಮೆಯಂ ತಳೆದ ।
ಗುರುಸಿದ್ಧರಾಮ ನವರಸಸಿದ್ಧ ನೀನೆಮ್ಮ ಕೃತಿಗೆ ಕೊಡು ನಿರ್ವಿಘ್ನಮಂ ॥ ೭

ಕಾಮಿತಾರ್ಥಾಮೃತರಸಾದಿಲಕ್ಷಣಸೌಮ್ಯ ।
ರಾಮಣೀಯಕಪದಾಲಂಕಾರಗಳ್ಗೆ ನಿಜ ।
ಸೀಮೆಯೆನಿಸುವ ಸೈಪನೀಕೃತಿಗೆ ಕುಡುವ ಚಿಂತಾರತ್ನವೆನಿಪ ಪುಣ್ಯ ॥

ನಾಮನಂ ಸದ್ಗುಣಸ್ತೋಮನಂ ಬುಧಸಾರ್ವ ।
ಭೌಮನಂ ಸಜ್ಜನಪ್ರೇಮನಂ ಶೀಲವಿ ।
ಶ್ರಾಮನಂ ಪಾಲ್ಕುಱಿಕೆಸೋಮನಂ ಹೃತ್ಕುಮುದಧಾಮದೊಳ್ ಮಿಗೆ ಜಾನಿಪೆಂ ॥ ೮

ಪರಮಸುಖವಾಸನಂ ವರಕಾಳಿದಾಸನಂ ।
ಕರದಾನಿಜಾಣನಂ ಶರಣನಹ ಬಾಣನಂ ।
ನಿರುಪಮವಿಚಾರನಂ ಗರುವಮಾಯೂರನಂ ಪದ್ಮರಸನಂ ಸರಸನಂ ॥
ಹರಿಹರಕವೀಶನಂ ಗುರುಭಕ್ತಿಕೋಶನಂ ।
ಹರನ ಕಣ್ಕೈವೈಗಳಾಗಿ ತನುಮನವಿತ್ತ ।
ಪರಿಣತರ ನೆನೆದು ಕೃತಿವೇೞಲೆನಗೈಮೊಗಂ ನಿರ್ವಿಘ್ನತೆಯನೀಯನೇ ॥ ೯

ನೀನಾರು ಗೂಳೂರ ಶಾಂತಿದೇವರ ಕೀರ್ತಿ ।
ನೂನಿನಿಯದೇಂ ಬಂದೆಯಾನಭೋಧರೆಗಿಳಿಯು ।
ತಾನಾಲಗೆಗಳೆರಡನುಳ್ಳ ಜೀವರ ಪೊರ್ದಿ ಮಂಡಲಾಗ್ರದ ಗೋತ್ರದ ॥
ಸ್ಥಾನಮಂ ಸಾರ್ದಗ್ನಿಮುಖರ ಗೇಹಂಬೊಕ್ಕು ।
ಡಾನೈಜವಚನಾಭಯಪ್ರದಂ ಸ್ವೇರಾಂಬು ।
ಜಾನನಂ ನೂಂಕೆ ಶಾಂತಿಯನುಳ್ಳ ನಿನ್ನೆಡೆಗೆ ಬಂದೆ ಕೇಳಿಲೆ ಚಂದ್ರಮಾ ॥ ೧೦

ಶರಣಹೃತ್ಕುಮುದಹಿಮಕಿರಣ ಕಾತ್ಯಾಯಿನೀ ।
ಹರಣ ಶುಭಕರಗಣಾವರಣ ನಿರುಪಮಕೃಪಾ ।
ಭರಣ ಹರ್ಯಜನಮಿತಚರಣನಂ ಮನಭಾವಕರಣದೊಳ್ ಪುದಿದಾವಗಂ ॥
ಕರದಲರ್ಚಿಸುತೆಯೊಡವೆರೆದ ನೋಟದ ಪರಾ ।
ತ್ಪರದರ್ಥದರ್ಥಿಗಳ ಪೊರೆದ ವರಗುಮ್ಮಳಾ ।
ಪುರದ ಶಾಂತೇಶಗುರುವರದನಡಿದಳೆದು ನಾನೊಱಿದ ಕೃತಿ ಮೆಱವುದರಿದೆ ॥ ೧೧

ಲಾಲ್ಯಮೆಲೆ ದೇವ ನಿಮ್ಮಯ ವಚನ ಭಕ್ತರ್ಗ ।
ಮೂಲ್ಯವೆನ್ನಯ್ಯ ನಿನ್ನುರುಭಕ್ತಿ ಭಾಪು ನೈ ।
ರ್ಮಲ್ಯ ನಿನ್ನಯ ಕೀರ್ತಿಯಖಿಳದಿಕ್ಕಿನೊಳು ಯತಿರಾಜ ನೀನಾದ ಕತದಿಂ ॥
ಕಲ್ಯಾಣದಾದಿಬಸವೇಶ್ವರಮಹತ್ವಮಂ ।
ಕಲ್ಯಾಣಮಾಗಿ ಶರಣರ್ಗಱಪುವೈ ಶಿವನ ।
ಕಲ್ಯಾಣದುತ್ಸವದ ನಾಗವಲ್ಲಿಯ ಮೆಱವ ಶಿವಪೂಜೆಯಾರ್ಯ ಶರಣು ॥ ೧೨

ಎಲೆ ಮಲ್ಲಣಾರ್ಯ ಕೇಳ್ ನಿನ್ನಯ ಪಿತಾಮಹಂ ।
ಲಲಿತವಾತೂಲತಂತ್ರಕ್ಕೆ ಟೀಕಂ ಮಾಡಿ ।
ನಲಿದಾಗಮಗ್ರಂಥವಚನದಿಂ ಗಣಭಾಷ್ಯರತ್ನಮಾಲೆಯ ರಚಿಸಿದ ॥
ಸುಲಭನನ್ವಯಭವನೆ ಮದ್ಭಕ್ತವಾತ್ಸಲ್ಯ ।
ದ ಲಘುಮಾರ್ಗೋದ್ಧರಣ ಸತ್ಯೇಂದ್ರಚೋಳಭೂ ।
ಲಲನಾಧಿಪನ ಕೃತಿಯನೊರೆಯೆಂದೊಡಾತನಾಣತಿಯಿಂದಲಾಂ ತೊಡಗಿದೆಂ ॥ ೧೩

ಭೂನುತವೃಷಾಧಿಪನ ಸದ್ಭಾಗ್ಯಮಿಾವರ್ತ ।
ಮಾನದೊಳ್ ಷಟ್ಸ್ಥಲಾಂಗವ ತಳೆದು ದಶದಿಗ್ವಿ ।
ತಾನದೊಳ್ ಸತ್ಕೀರ್ತಿಯಾಂತಿಂದ್ರಿಯಾದಿವಾಯುಪ್ರಾಣಿಯಲ್ಲದನಘ ॥
ಧ್ಯಾನಮಂ ಸಂತತಾನೂನಮಂ ಶರಣಸಂ ।
ತಾನಮಂ ಶಂಕರಸ್ಥಾನಮಂ ದಿವ್ಯಸ ।
ನ್ಮಾನಮಂ ಚಿಕ್ಕಬಸವಾಂಕನ ಲಸತ್ಕ್ರಿಯಾಜ್ಞಾನಮಂ ಪೊಗಬಲಳವೇ ॥ ೧೪

ಕರುಣಾಳುವಮರಗುಂಡದ ಮಲ್ಲಿಕಾರ್ಜುನಾ ।
ರ್ಯರ ನಿರೂಪದಿ ನಿಶಿತಶೂಲವೇಱಿದ ಮಹಾ ।
ಗುರುಭಕ್ತನನ್ವಯಾಂಬುರುಹದಿನನಾಥ ಗುಬ್ಬಿಯ ಮಲ್ಲಣಾಚಾರ್ಯರ ॥
ತರುಣ ಗುರುಭಕ್ತಾಖ್ಯಗರ್ಭಾಬ್ಧಿಚಂದ್ರಮಂ ।
ವರಬಸವಪೌರಾಣದುರುಮಲ್ಲಣಾರ್ಯನಘ ।
ಹರಸಿದ್ಧಮಲ್ಲೇಶಗುರುಚರಣಸುರಕುಜಂ ಹೃದ್ಭೂಮಿಯೊಳ್ ಮೆಱೆಯಲು ॥ ೧೫

ತನ್ನ ಮೋಹದ ಭಕ್ತ ಚಾರಮಾಂಕನ ನೋಡಿ ।
ನಿನ್ನಿಷ್ಟವೇನೆನಲ್ ದೇವ ನಿಮ್ಮಡಿಗಳಿಂ ।
ದೆನ್ನ ಜನ್ಮದ ಜಾಡ್ಯ ಪರಿದು ಲೇಸಂ ಪಡೆದೆನಯ್ಯ ಸತ್ಯೇಂದ್ರಚೋಳಂ ॥
ಮುನ್ನ ಕೈಲಾಸಕ್ಕೈದಿದ ಕಥೆಯನೆನಗೆ ಕೃಪೆ ।
ಯಿನ್ನಿರೂಪಿಸೆ ಕಾವ್ಯವಿನಚಂದ್ರಧರೆಗಳು ।
ಳ್ಳನ್ನೆಗಂ ಪರಿಕಲಿಸಿ ಮೆಱೆವುದೆನಲಾತಂಗೆ ಪೇೞ್ದನಾನಂದದಿಂದ ॥ ೧೬

ಕೃತಿಯ ಪಲ್ಲವಿ ತೊಡಗಿ ಪೂರ್ಣಮಪ್ಪನ್ನಮಿಾ ।
ಕೃತಿಯೊಳುತ್ಪ್ರೇಕ್ಷೆಯಿಲ್ಲದುದೊಂದು ಪದವಿಲ್ಲ ।
ಕೃತಿಗದು ನಿಮಿತ್ತದಿಂ ಭಾವಚಿಂತಾರತ್ನವೆಂಬ ಪೆಸರೀಕಾವ್ಯಕೆ ॥

ಪತಿಯುಮುರಗುಂಡಮಲ್ಲೇಶ್ವರಂ ಕಥೆಯುಜೀವ।
ಯತಿ ನಾಗವಲ್ಲಿಯುರುಶಿವಪೂಜೆಯಾರ್ಯನನು।
ಮತದೊಳೊರೆದಂ ಮಲ್ಲಣಾರ್ಯನೆನಲಿದು ಸುಜನವದನಭೂಷಣವಾಗದೆ॥ ೧೭

ಅಮಮ ಚಂದ್ರನ ಕಂಡು ವಾರ್ಧಿ ವ್ಯೆವೆರ್ಚುಗುಂ।
ಹಿಮಕಾಂತ ಕರಗುಗುಮದೇಕೆ ಗಾಂಭೀರ್ಯಹೃ।
ದ್ವಿಮಲಂಗಳಪ್ಪುದಜ್ಞಾನಂತೆನ್ನ ಕಬ್ಬದಿಂದಟ್ಟು ಸಜ್ಜನರಿಗಕ್ಕುಂ॥
ಕುಮತಿದುರ್ಜನರು ಪರಿಣಮಿಸದಿರಲೇನಾಯ್ತು।
ಕಮಲಾರಿ ಪೂರ್ಣತೆಯೊಳೊಗೆಯೆ ಕಾಣುತವೆ ಕ।
ರ್ದಮಜಲದ ಬೆಂಜಿ ಕಗ್ಗಲ್ಲುಗಳು ಪೆರ್ಚಿ ಕರಗದೊಡೆ ಸಸಿಗದು ಹಾನಿಯೇ॥ ೧೮

ಕ್ಷ್ಮಳಜಟಿಕುಳಾಕ್ಷರ ಸಮಾಸ ತದ್ಧಿತ ಸಂಧಿ।
ಗಳನಪಭ್ರಂಶಾಖ್ಯೆಯಾಖ್ಯಾತಭೇದಗಳ।
ತಿಳಿದು ಯತಿಭಂಗಾರ್ಥಶೂನ್ಯ ಪುನರುಕ್ತ್ಯರ್ಥ ನೇಯ ನೀರಸಮುಖ್ಯವಾ॥
ಕಳೆದಲಂಕಾರ ಚಿತ್ರಾರ್ಥ ರಸ ಭಾವವೆ।
ಗ್ಗಳಿಸೆ ತಿದ್ದುವುದು ಶಿವಭಕ್ತರೆಂದೆನಿಪ ಕವಿ।
ಗಳು ದುರ್ಜನವ್ರಾತಘೂಕರವಿಗಳು ಶಿವನ ಕಿವಿವಾಯ್ಗೆ ನೆಱಿ ಸವಿಗಳು॥ ೧೯

ರಸಜೀವಚಿತ್ರಾರ್ಥ ನಿರ್ದೋಷ ನೆಲೆಯಾದ।
ಹೊಸರನ್ನಮುಂ ವೇಗಡಂಗಳಂ ಕಳೆದು ಸೇ।
ರಿಸೆ ಹಾರದಲ್ಲಿ ಛಿದ್ರಂಗಂಡೆವೆಂಬೊಲಿಂತೀಕಾವ್ಯರತ್ನದಲ್ಲಿ॥
ಒಸೆದು ತೋಱುವ ಲಕ್ಷಣೋಕ್ತಿಯುಱಿಯದ ಕುಜನ।
ವಿಸರವುಱಿ ಮಾಟ್ಪ ತಪ್ಪಂ ಕಂಡೆವೆಂದು ಗ।
ರ್ಜಿಸುವರೇಕದೆ ಗುಣಕೆ ಕಾರಣಂ ಹೃದಯಭೂಷಣವೆಂದು ನೆಱಿನೋಡದೆ॥ ೨೦

ತ್ರಿಣಯನಣುಗಂ ತಿರುಜ್ಞಾನಿಸಂಬಂಧೀಶ।
ನಣಿಯರದಿ ಜಿನಮತವಿದಾರಣಂಗೈದು ಧಾ।
ರಿಣಿಯಲ್ಲಿ ತಿರುಪಾಟು ಪದಿನಾಱು ಸಾವಿರವನೊರೆಯುತ ಕುಲಚ್ಚರಿಯಗೆ॥
ಪ್ರಣವಪಂಚಾಕ್ಷರಿಯ ಮಹಿಮೆಯುಂ ತಿಳಿಪೆ ಸ।
ದ್ಗುಣಿಯಪ್ಪ ಸತ್ಯೇಂದ್ರಚೋಳಭೂಪನ ಕಥಾ।
ಭಣಿತೆಯುಂ ದ್ರಾವಿಡದೊಳೋದಿದಂ ಕನ್ನಡದಿ ಪೇಳ್ವೆನಾಲಿಸೆ ಸುಜನರು॥ ೨೧

ತರುಣಿ ಪೊರೆದಣುಗನಶ್ವದ ಖುರದ ಹತಿಯಿಂದ ।
ಹರಭಕ್ತನಱಿಯುಲದ ಕೇಳ್ದು ಕೊಲೆಯಂದವಂ ।
ಪರಿಕಿಸಿ ನಿಜಾತ್ಮಜಂ ಮೊದಲಱಿವಿಗೆಂದ ನುಡಿಗಾಮುದ್ದುಮಗನ ತಲೆಯು ॥
ಅಱಿಸುವೆಡೆಯೊಳು ಮತ್ತೆ ಭಕ್ತವಧೆಯೆಂದು ನಿಜ ।
ಶಿರದೊಡನೆ ತಱಿದೆಂಟು ತಲೆಗಳಂ ಪಡೆದು ಶಂ ।
ಕರನೂರ್ಗೆ ಪೋದ ಸತ್ಯೇಂದ್ರಚೋಳನ ಕಥೆಯನಿದ ಬೆಳಸಿ ಕೃತಿಮಾಱಿಪ್ಪನು ೨೨

ಕೃತಿಯಿಂತಿದಕ್ಕೆ ಮೊದಲಾವುದೆಂದೆನೆ ಪತಿ ।
ವ್ರತೆಯಂತೆ ಕಾಂತಾನುಕೂಲದಿಂ ಕೌರವ ।
ಕ್ಷಿತಿವರನ ಸೇನೆಯಂತಾದ್ರೌಣಿಯಿಂ ವೃಕ್ಷದಂತಾಪ್ರನಾಳದಿಂದ ॥
ಕ್ರತುಭುಜರ ಸುಡಲು ಗರಳವನುಗುೞ್ವ* ಲೋಚನದಿ ।
ಶ್ರುತಿಪನಂತಚಲಾದ್ರಿವೃತ್ತದಿಂ ಕೃಷ್ಣಗಿರಿ (?)।
ವ್ರತರನೊಳಕೊಂಡು ತದ್ವೈರಿಗಳ ಗರ್ಜಿಸುವ ತೆಱದೊಳೊಪ್ಪಿತು ಸಮುದ್ರಂ ೨೩

ಆವಾರ್ಧಿಮಧ್ಯಭುವನಜಕರ್ಣಿಕೆಯೊ ಕೂರ್ತು ।
ಭೂವನಿತೆಗಿನಕುಲದ ನೃಪನೊಸಗೆಗೆಟ್ಟಸಿದ ।
ಜೀವನಿಧಿವಸನದೊಡನೆಸೆವ ರವಿಯುಂಗುರವೊ ಬೊಮ್ಮನೆನಿಸುವ ಸೂತ್ರಿಕಂ ॥
ದೇವತೆಗಳೆಂಬ ಹಂಸಗಳನಾಡಿಪ ಕಂಭ ।
ಮೋ ವಿಚಾರಿಸೆ ಬೆಡಂಗಮರ್ದು* ಕಣ್ಗೆಡ್ಡಮಾ ।
ಯ್ತಾವರಿಸೆ ತೇಜವಗ್ಗದ ಮೇರು ಗಿರಿರಾಜ ವಿಧೃತಕಲ್ಪಾವನೀಜಾ ॥ ೨೪

ಉಡುವರಂ ದಕ್ಷಸುತೆಯರ ಮದುವೆಯಾಗಿ ಬ ।
ರ್ಪೆಡೆಯೊಳಿಂದಿರೆ ನಿಜಾಗ್ರಜನನುರೆ ಬಾಗಿಲಂ ।
ತಡೆಯಲಚಲತ್ವದಿಂದಿರ್ದಂತಿರಿರ್ಪ ಮೇರುವಿನ ಸಾನ್ನಿಧ್ಯದಲ್ಲಿ ॥
ಕಡುನೇಹದಿಂ ಸುತವಿವಾಹಕ್ಕೆ ಬಂದು ಪಾ ।
ಲ್ಗಡಲಜಾದ್ಯರ್ಗೆ ಭಾವಿಸೆ ಗೋತ್ರವಾಗುತಂ ।
ದುಡುತ ಮುಸುಕಿಟ್ಟುದಂಬರವನೆನೆ ಜಗಜಗಿಸುತೊಪ್ಪಿತಾರಜತಾಚಲಂ ॥ ೨೫

ಪಸುರ್ವರಲ್ಗಳ ಭಾಗ್ಯವೆನಿಪ ಸುರತರುಗಳಿಂ ।
ಸಸಿಗಲ್ಗಳೀಱಿಗ್ಗಿಯಿಂ ಕೆಂಗದಿರ್ಗ*ಳಂ ಕಱಿವ ।
ಮಿಸುಪ ಚಿಂತಾರತ್ನಶಿಖರಗಳ ಬಿಣ್ಪಿನಿಂ ಕನಕಪಂಕಜಸರಸಿಯು ॥

ವಿಸರದಿಂ ನೈದಿಲಿಂ ಮೆಱೆವ ಪೂದೊಣೆಗಳಿಂ ।
ದೆಸೆದತ್ತು ಪಂಚವರ್ಣಮೆ ರಸನೆಯಾದ ತಾ ।
ಪಸಜನಾಖಿಲರ ಸುಖರಸದಾಲವಾಲವಾಹಾ ಭಾಪು ರಜತಶೈಲಂ ॥ ೨೬

ಪೂವಿಲ್ಲಗಡ ತನಗೆ ಕುಸುಮಶರನೆಂಬ ಪೆಸ ।
ರಾವ ಕಾರಣವಾದುದಳಿವೆದೆಯನಾಗಿ ಲೋ ।
ಕಾವಳಿಯ ಗೆಲ್ದ ಬಗೆಯೆಂತು ಪೆಣ್ಮಕ್ಕಳಂ ಕೊಂದು ಕೂಗಿಡುವ ತನಗೆ ॥
ಕಾವನೆಂದೆಂಬ ಪೆಸರೇ ಮೆಯ್ಯಱಿಯ ಬಾರ ।
ದಾವಿಗಡನ ವಿಚಾರದಿಂ ಲಜ್ಜೆಗೆಟ್ಟವಂ ।
ಗಾವಟಿಕ್ಕೆಯೆಂದು ಮಾರನ ಜಱಿದು ತಪವಿರ್ದರಲ್ಲಿ ವರಸನ್ಮುನಿಗಳು ॥ ೨೭

ಆ ರಜತಪರ್ವತಾಗ್ರದೊಳೆ ಪೀಯೂಷಪರಿ ।
ಖಾರಚಿತಹೇಮಸುಪ್ರಾಕಾರಮರಕತಮ ।
ಹಾರಮ್ಯನಪ್ರವೃಷಭಧ್ವಜಂಗಳೊಳಿಂದುಮಣಿದೆನೆಗಳಿಂ ಪರುಷದ ॥
ದ್ವಾರಬಂಧಾಧಿಕಕವಾಟಂಗಳಿಂ ಕಾವ ।
ಭೈರವಗಣಾಕೀರ್ಣದಾಕೊತ್ತಳಂಗಳಿಂ ।
ರಾರಾಜಿಸಿತು ಶಂಕರನ ವಾಸ ಕೈಲಾಸ ವಿಮಲಮೂರ್ತಿಯ ವಿಲಾಸ ॥ ೨೮

ವೇದಪುರುಷರ ಮಂತ್ರದೇವತೆಗಳತಿಪುಣ್ಯ ।
ನಾದಮೂರ್ತಿಗಳ ಲಿಂಗೇಂದ್ರಿಯರ ಸಂತತಂ ।
ಸಾದರಗುಣಾಂಚಿತರ ಷಟ್ಸ್ಥಲಬ್ರಹ್ಮಿಗಳ ಪಾವನಗೃಹಂಗಳಿಂದೆ ॥
ಶ್ರೀದಿವ್ಯರತ್ನದುಪ್ಪರಿಗೆ ಧವಳಾರಗಳ ।
ಬೀದಿಗಳ ಚೆಲ್ವಿನಿಂದೆಸೆವ ಪುರಮಧ್ಯದೊಳ್ ।
ಮಾದೇವನರಮನೆ ಬೆಡಂಗಾಗಿ ಮೆಱೆದುದದಱೊಪ್ಪವನದೇಂ ವರ್ಣಿಪೆಂ ॥ ೨೯

ನಾಲ್ವಂಕದರಭೇದಗಳ್ ನೆಲಂ ಜೊನ್ನ ವೈ ।
ಗಲ್ವೊದಕೆಜಗಲಿ ಮೂಱಾಱು ರನ್ನಂಗಳೈ ।
ಕಿಲ್ವೆಟ್ಟನಣುಗಿಗೆಡದೊಡಲನಿತ್ತಲ್ಲಿ ಮಂಡಿಸಿದ ಶಂಕರನಟ್ಟಯಿಂ ॥
ಸೊಲ್ವೆಣ್ಣಿನಾಣ್ಮನಮರ್ದು*ಣಿಯೆಱೆಯನುಂ ಕರ್ವು ।
ವಿಲ್ವೊತ್ತನೈಯ ಮೊದಲಾದ ಸಗ್ಗಿಗರ್ರೈದೆ ।
ಸಾಲ್ವಿಡಿದು ಸಿಂದೋಲಗಂ ಪಳಚ್ಚನೆ ಮೆಱೆದುದಯ್ಯಯ್ಯ ಸೈಪದೆಂತೋ ॥ ೩೦

ಹರಿಸಜಲದಕ್ಷಿಗಳ ಮುನಿಗಳಿಂ ಮೈದೆಗೆದು ।
ಹರನೊಳೊಂದುವ ಪರಮಸಾಷ್ಟಾಂಗರಿಂ ಪರಿವ ।
ಕಿರಣಂಗಳೊಡನೆ ಕಣ್ಮುಚ್ಚುವಾನಂದರಿಂ ಸಾಸಿರದಳಾಬ್ಜಮೀವ ।
ಪರಮಯೋಗೀಶರಿಂ ಸದ್ವಾಸನಾಂಗರಿಂ ।
ಭರಿತಸುಜ್ಞಾನರಿಂ ಹರಣಾರ್ಪಣಾಢ್ಯರಿಂ ।
ಪರಮಾನುರಾಗಿಗಳಿನೆಸೆವ ಸಭೆಯುಷ್ಟವಿಧಪೂಜೆಯೆನೆ ಕಣ್ಗೆಸೆದುದು ॥ ೩೩

ಶಶಿಯಿಂದೆ ಮೆಱೆವ ತುಂಬುರನಾರದರ್ಕಳಿಂ ।
ದೆಸೆವ ಶಕ್ತಿತ್ರಯಗಳಿಂದೆ ವೇದಂಗಳಿಂ ।
ಮಿಸುಪ ಸನಕಾದಿಯೋಗೀಶರಿಂ ಷಡ್ಗುಣದ ಸಿರಿಗಳಿಂ ಮಾತೃಕೆಯರಿಂ ॥
ವಸುಗಳಿಂ ಬ್ರಹ್ಮರಿಂದಧಿಕವಿಶ್ವೇದೇವ ।
ನಿಸರದಿಂ ರುದ್ರರಿಂ ರವಿಗಳಿಂ ಶರಣತೇ ।
ರಸರಡಿಯನೋಲೈಸುತಿರ್ಪ ಮನುವರ್ಗದಿಂದಭವನೋಲಗನೆಸೆದುದು ॥ ೩೪

ಶೂಲಿಯಿದಿರೊಳು ನಿಲದೆ ಕೆಲಸಾರು ಮಾಧವ ಕ ।
ಪಾಲಿಯ ಸಭಾಂತರದೊಳುಲಿಯದಿರು ಕಮಲಭವ ।
ಕಾಲಕಂಧರನ ಮುಂಬಿನೊಳುಡುಗಿ ಗರ್ವಗಳನಿಂದ್ರಾದಿಸುರರು ರುಂಡ ॥
ಮಾಲಿಯಾಸ್ಥಾನದೊಳು ಭಯವಟೆಯದಿರಿಯಸುರ ।
ಜಾಲವೆಂದಾಜ್ಞೆಗೆಯ್ದೆಸೆದರಾನಂದಿಮಾ ।
ಕಾಲರುರುತರವೇತ್ರಲೀಲರೆಮ್ಮೊಡೆಯನ ವಿಶಾಲದೊಡ್ಡೋಲಗದೊಳು ॥ ೩೫

ಕರೆದು ಸಿಂಹಾಸನದ ಸನ್ನಿಧಿಗೆ ಗಜಮುಖನ ।
ನುರಗಕಂಕಣದ ಕರದಿಂ ನವಿಲನಡರ್ದನಂ* ।
ಶಿರವ ತಡವುತ್ತೆರಲೆಗೈಯ ಪುಲಿದೊವಲುಡಿಯೊಳಿಡುತವಟ್ಟಿಯ ಪೆಂಪುಮಂ ॥
ಪರಿತೋಷವಂ ಬೀಱುತೆಸೆವ ಶಂಕರನೆ ಭಾ ।
ಪುರೆ ದೇವ ದೇವಕುಲಚಕ್ರೇಶ ನಿನ್ನ ಸಾ ।
ರ್ದರಿಗರಿಗಳಿಲ್ಲೆಂದು ಕೈಯೆತ್ತಿ ಚಂಡಕೀರ್ತಿಗಳು ಪೊಗಟುತ್ತಿರ್ದರು ॥ ೩೬

ಕಡುಲೋಭವೆಡೆಗೊಂಡು ಗತಿಗೆಟ್ಟು ಶ್ರುತಿಯಿಲ್ಲ ।
ದಡಸಿಯಣಲೊಳು ಬಿಸಮನೀದೋಷಮಂ ಕಳೆಯೆ ।
ಮೃಡನ ಕರ್ಣದ್ವಯದ ಮೂಲಂಗಳಂ ಸಾರ್ದು ಸಲೆತೊಟ್ಟು ಸವೆಯದಿರ್ಪ ॥

ಹೆಡೆಗೆ ರನ್ನಂಬಡೆದು ಭುಜಪರಾಕ್ರಮದಿಂದೆ ।
ನಡೆದು ವಿವರಿಗಳಾಗೆಯುಮರ್ದನುಂಬವರೊಳಿ ।
ಮೃಡಿಜಿಹ್ವೆಯೆನಿಸೆಯಶ್ವತಕಂಬಲರು ಶಿವನ ಹಾಡಿ ಹರಸುತ್ತಲಿಹರು ॥ ೩೫

ಮುಂಗಡೆಯೊಳುಲಿವ ಪಂಚಮವಾದ್ಯದಿಂ ನವರ ।
ಸಂಗಳಭಿನಯಿಸುವೆಡೆಯೊಳ್ ಭಕ್ತಿರಸವೆಸೆವ ।
ಸಿಂಗರವುದಾಗೆ ತಾಂಡವಮುಖ್ಯನೃತ್ಯಂಗಳಿಂದೆ ರೂಪಾದಿಯಾದ ॥
ಅಂಗದಿಂದಂ ಗಾಡಿ ಸಂಚಾರಿಗಳಿನುಚಿತ ।
ಸಾಂಗಭಾವಂಗಳಿಂ ಶಿವನ ಲೀಲೆಯೊಳ್ಪೈದು ।
ಪಿಂಗೆ ವಿಂಶತಿಯ ಭೃಂಗಿರಿಟಿ ನರ್ತಿಸೆ ಗಣಂಗಳ್ ಭಾಪೆನುತ್ತಿರ್ದರು ॥ ೩೬

ಭೃಂಗೀಶಮುಖ್ಯರಂ ಪುರಿಯಿಟ್ಟು ಸತ್ಕೃಪಾ ।
ಪಾಂಗದಿಂ ನಿಜಕುಮಾರನ ಗುಹನನೀಕ್ಷಿಸು ।
ತ್ತುಂಗಜಾರಾತಿ ಬೊಮ್ಮನ ನೋಡಲೆದ್ದು ಕರಕಮಲಮಂ ಮುಗಿದು ನಿಂದ ॥
ಇಂಗಿತಕಿದೇನು ವಿಪರೀತವೆಂದೀಕ್ಷಿಸೆ ಗ ।
ಣಂಗಳಜನಲ್ಲಿ ಬಿನ್ನೈಸಿದಂ ದೇವ ಕುವ ।
ರಂಗಕ್ಷರವನಜಿಪಲೆನ್ನನಟ್ಟಿದ ಹದನ ಜೀಯ ಚಿತ್ತೈಸೆಂದನು ॥ ೩೭

ಉದಯಕಾಲದೊಳು ಪಠನಾಗಾರಕೈದಿ ಷ ।
ಡ್ವದನನಂ ಗದ್ದುಗೆಯೊಳಿರಿಸಿ ಸುದ್ದಗೆಯೊಳ ।
ಗ್ಗದ ಬಿಣ್ಪನೋಂಕಾರಮಂ ಬರೆಯಲೆನ್ನ ಕೈವಿಡಿದರ್ಥಮಂ ಕೇಳ್ದೊಡೆ ॥
ಮೊದಲನ್ವಯಂಗೇಳ್ವ ಮಾತು ಲಘುವೆನಲೆನ್ನ ।
ಗದರದೆ ಕಶಾದಂಡದಿಂ ಹೊಡೆದನಯ್ಯ ಪು ।
ಟ್ಟಿದ ದಿವಸಸಪ್ತಕಕೆ ತಾರಕಾಸುರನ ಕೊಂದದಟನೆನ್ನಂ ಬಗೆವನೇ ॥ ೩೮

ಒಡೆಯನ ಕುಮಾರಕಂ ಬಾಯಲ್ಲಿ ಬಲ್ಲಿದಂ ।
ಕಡೆಯೊಳೇಗೆಯ್ವೆನೆಂದಳ್ಕಿ ಸುಶ್ಲೋಕಂಗ ।
ಳಿಡೆವಿಡದೆ ಪನ್ನೆರಡು ಸಾಸಿರದೊಳುಸಿರ್ದನಾ ಪ್ರಣವದರ್ಥವನೀತಗೆ ॥
ಜಡಮತಿಯೆ ಸಾರೆನುತ್ತೆನ್ನ ಜಚಿದೆದ್ದು ನಿ ।
ಮ್ಮಡಿಯ ಮುಂಬಿಗೆ ಬಂದನಯ್ಯ ನಾನಜಿಯೆನೆಲೆ ।
ಮೃಡ ವಿಶೇಷಾರ್ಥಮಂ ಪೇಳ್ವುದೆನಲಭವನೊರೆದಂ ಪ್ರಮಥರಾನಂದಿಸೆ ॥ ೩೯

ಶ್ಲೋಕಲಕ್ಷದ್ವಾದಶಂಗಳಿಂ ಶಿವನೊರೆದೊ ।
ಡಾಕುಮಾರಂ ಕರಾಬ್ಜಂಗಳಂ ಮುಗಿಯುತಗ ।
ಜಾಕಾಂತ ಕೇಳಯ್ಯ ಬೊಮ್ಮನಂ ಜಡನೆಂದುದೆನ್ನದಪರಾಧಮೆನಲು ॥
ಈ ಕಟಕಿ ಬೇಡವ್ವೆ ಪ್ರಣವಮೆನಿತುಸಿರೆನೆ ಮ ।
ಹಾಕೋಟಿ ಪನ್ನೆರಡೆನಲ್ಕೆ ಚಿಂತಿಸಿದಂ ಪಿ ।
ನಾಕಿ ಮಜ್ಜಿಹ್ವೆಯಿಂದಾವಕಾಲದೊಳು ಪೊಱಮಟ್ಟವಗೆ ಸಾರ್ದುದೆಂದು ॥ ೪೦

ಹಿಂದೆ ಕೋಟ್ಯನುಕೋಟಿಯುಗದೊಳು ಜಲಪ್ರಾಣಿ ।
ಯೊಂದನಿರಲೀಯದಬ್ಧಿಯೊಳು ಪಾರ್ವತಿಗೆ ಪೇ ।
ಳ್ವಿಂದು ತನ್ಮಾತ್ರೆಯ ನವಿಲ್ಮುಡಿಯೊಳಳಿಯಾಗಿ ಕೇಳಿದನು ಚಾತುರ್ಯದಿಂ ॥
ಎಂದಱಿದು ಚಪಲ ಪೇಳೆನಲು ಗದ್ದುಗೆಯನಿೞಿ ।
ತಂದೆ ನಾಂ ಮೇಲಿರ್ದು ಪೇಳ್ವೆನೆನೆ ಕಡುಮುಳಿಸಿ ।
ನಿಂದ ಹದಿನಾಱು ಸಾಸಿರ ಜನ್ಮದಲ್ಲಿ ಪುಟ್ಟೆಂದು ಗುಹನಂ ಶಪಿಸಿದಂ ॥ ೪೧

ಈ ವಿಷಮಶಾಪಕಾತಂ ಕುವರನೆನೆ ಮೂಱು ।
ಸಾವಿರ ಗಣಂಗಳಂ ಝುಂಕಿಸುತ್ತವನೊಡನೆ ।
ನೀವುದಯಿಸೆಂದೊಡಂತಹುದಲಾಜ್ವರದ ಮೊದಲೊಳ್ ಪಾಲು ಬಿಸಮೆಂಬಿನಂ ॥
ದೇವ ಮುಂಗೋಪದೊಳಗೆಮ್ಮ ನುಡಿಯುಚಿತವ ।
ಳ್ಳೀವತ್ಸನಿಂದ ನುತಿ ಷೋಡಶಸಹಸ್ರಗಳ ।
ನೀವೊಪ್ಪುಗೊಂಬೊಂದು ಜನ್ಮ ಸಾಲ್ಗಿವಗೆನಲ್ ಪಶುಪತಿ ನಗುತ್ತಿಂದನು ॥ ೪೨

ಶಾಪವೆನ್ನವರಿಗುಂಟೆ ಗಣಂಗಳ್ ನೀವು ।
ಭೂಪವಿತ್ರಾರ್ಥದಿಂ ಜನಿಸಿ ಭಕ್ತವ್ರಜಾ ।
ಳಾಪವಂ ತಿರ್ದಿ ಪೇರಾಂಬಣದ ತಿಲ್ಲವೆಣ್ಬಾಂದಣಾವ್ವೆಯಱಾಗಲು ॥
ಪೋಪುದೆಂದೊರೆದು ತತ್ಪ್ರಣವದರ್ಥಮನಱಿಯ ।
ಲಾ ಪಿತಾಮಹನ ನಾಗೀಶನಾಗಲ್ಕಳುಪು ।
ತೋಪ ತನ್ನುಣ್ಣುಗನ ತಿರುಜ್ಞಾನಸಂಬಂಧಿಯಾಗೆ ಪೇಟ್ಟಿಟ್ಟಲಭವಂ ॥ ೪೩

ಶ್ರೀಕಾಳಿಯಾದಿಶೈವಂಗೊಗೆದು ಶಂಭುಗಿರಿ ।
ಜಾಕರುಣಮಂ ಪಡೆದನೇಕಮಹಿಮೆಯ ಮೆಱೆದು ।
ಶಾಕುಜ್ಜೈನರ ಕೊಲ್ವ ಪದದೊಳವದಿರಿಗೆ ಶೂಲಂಗಳಂ ಸವೆದಿರಿಸಿದ ॥

ಆ ಕುಲಚಕ್ರೇಶ್ವರಿಯುಂಗೆ ಪಂಚಾಕ್ಷರಿಯುನಱುಪಿ ।
ಲೋಕಗುರುವಹ ಪಿಳ್ಳೆನಯಿನಾರು ಸದ್ಗುಣಾ ।
ಸ್ತೋಕಸತ್ಯೇಂದ್ರಚೋಳನ ಕಥೆಯನೊರೆದುದಂ ಪೇೞ್ವೆನಾಲಿಪುದಧಿಕರು ॥ ೪೪

ಪೆಱಿದಲೆಯನಾಳ್ಗಳಗ್ಗದ ಬಗ್ಗೊಗ್ಗ ಸಿರಿವೆಣ್ಣ ।
ನೆಱೆ ತಳೆದ ಬಿಸಜಗಳೊ ತುೞಿಲ್ಗೈಯುತಿಹರ ಕಣ್ ।
ಪಱವೆಗಳಿಗುಣಿಸೀವ ಪೊಂದಾವರೆಗಳೊ ಮೇಣ್ ಜತಿಕುವರರಸುವೆನಿಸುವ ॥
ಮಱೆಯುಂಜೆವಿಂಡಾಡುವಲರ್ವನವೊ ಪೇೞೆನಲ್ ।
ಮೆಱೆವ ಪೃಥ್ವಿಯ ಮಹತ್ತ್ವನ ಪಾದಪದ್ಮಂಗ ।
ಳುಱೆ ಬಿಡದೆ ನೆಲಸುಗೆನ್ನೆರ್ದೆಗೊಳನೊಳಗೆ ಜಾನನಱುಗಂಪನುಱೆ ಬೀಱುತೆ ॥ ೪೫

ಇದು ಸಕಲಭಕ್ತಪದಪಂಕೇಜರೇಣುವು ।
ಸ್ತ್ವದ ಮಲ್ಲಣಾರ್ಯನಾಚೇರಮಾಂಕಂಗೆ ಬೆಸ ।
ಸಿದ ಭಕ್ತಸತ್ಯೇಂದ್ರಚೋಳಕೃತಿ ಭಾವಚಿಂತಾರತ್ನವನುಲಕರ್ಣ ॥
ಹೃದಯುವುಸ್ತಕವದನಸರ್ವಾಂಗಸೌಖ್ಯಕಾ ।
ಸ್ಪದಮಖಿಳಸುಜನರ್ಗೆ ಪಂಚಾಕ್ಷರಿಯ ಮಹ ।
ತ್ವದ ಬೋಧೆಯೆಂದೋದಿದೊಡೆ ಕೇಳಿದಿಷ್ಟಾರ್ಥಸಿದ್ಧಿಸರ್ವರಿಗಪ್ಪುದು ॥ ೪೬

ಮೊದಲನೆಯ ಸಂಧಿ ಸಮಾಪ್ತಂ

---

## ಎರಡನೆಯ ಸಂಧಿ

ಸೂಚನೆ ॥ ಪಾವನಚರಿತ್ರನುತ್ಸವಕಲ್ಪವೃಕ್ಷನೀ ।
ಭೂವಿನುತಸತ್ಯೇಂದ್ರಚೋಳಧರಣೀಶ್ವರಂ ।
ದೇವದೇವನ ಚರಣಸೇವೆಯಿಂ ಸುಖದಿಂದ ರಾಜ್ಯವಾಳುತ್ತಿರ್ದನು ॥

ನೇವಳದ ಫಣಿಯು ಪೆಡೆವರಲ್ಗಳೊಳು ಮಾರ್ಪೊಳೆವ ।
ಸಾವಿರ ನಿಜಾಂಗದಬಲೆಯರ ಸವತಿಯರೆಂದು ।
ದೇವ ನಿಮ್ಮಂ ಪೊಯ್ಸ ಬಗೆಯೊಳವು ಕರವೆತ್ತಿ ಕಾಣುತಿವರಿಂದನೆನ್ನ ॥

ಈ ವಿಧಿಗೆ ವಲ್ಲಭಂ ತಂದನೆನುತುಂ ಮುಳಿಯೆ ।
ಪಾವ ತೆಗೆದಾರಸಾತಳಕಿಟ್ಟು ಪೋದರಾ ।
ಭಾವಕಿಯರೆಂದಗಜೆಯುಂ ತಿಳಿಪಿಡಮರಗುಂಡದ ಮಲ್ಲಿನಾಥ ಶರಣಾ ॥

ಎಲೆ ಕುಲಚ್ಛುರೆಯು ಕೇಳ್ಳೈ ಮೇರುವಿರ್ಪ ಭೂ ।
ತಲವಿಳಾವೃತವರ್ಷವದಱ ತೆಂಕಲು ವಿನಿಷಧ ।
ಕುಲನಗಂ ಬೞಿಕ ಹರಿವರ್ಷವಂತಾ ಹಿಮದ ಶಿಖರಿ ಕಿಂಪುರುಷವರ್ಷಂ ॥
ಸಲೆ ಮೆಱೆವುದಿಂತು ಹಿಮವನ್ನಗೇಂದ್ರಂ ಪೂರ್ವ ।
ಜಲಧಿ ಪಶ್ಚಿಮವಾರ್ಧಿಗಳ ಕೂಡಿಕೊಂಡು ನಿ ।
ರ್ಮಲಶಿವನ ಮಾವನೆನಿಸುವ ಬಿಣ್ಪಿನಿಂದೆಸೆವುದದಱ ದಕ್ಷಿಣದೊಪ್ಪುಗುಂ ॥

ಉತ್ತಾನಪಾದನೆನಿಸುವ ರಾಜಋಷಿ ಮೊದಲು ।
ಪೆತ್ತ ಭರತಂಗೆ ಹಿಮವಂತದಿತ್ತಣ ಧರೆಯ ।
ನಿತ್ತ ಕತದಿಂದೆ ಭಾರತವರ್ಷವೆನಿಸಿತದಱಾಕಾರವೆಂತೆಂದೊಡೆ ॥
ಬಿತ್ತರಿಪೆನಿನಕುಲದ ನೃಪನೆಂಬ ಕಾವಂಗೆ ।
ತೆತ್ತುಮನವುಂ ಭೂಮಿರತಿ ಪುರುಷಧನುವನ ।
ಚ್ಯೊತ್ತಿಕೊಂಡಳೊ ತನ್ನ ಪೇರುರದೊಳೆನೆ ಬಿಗಿದ ಬಿಲ್ಲಂತೆ ಮೆಱೆದಿದು[illegible]ನು ॥

ಮಣಿ ಸರ್ಪ ನಕ್ಷತ್ರ ಧೇನು ಗಿರಿ ತರು ಸರ್ವ ।
ಗುಣ ಮಂತ್ರತತಿಯೊಳೆಸೆದಿರ್ಪ ಚಿಂತಾರತ್ನ ।
ಫಣಿಪ ಚಂದ್ರಮ ಕಾಮದುಘ ಮೇರು ಸುರವೃಕ್ಷ ದಾನ ಪಂಚಾಕ್ಷರಿಗಳ ॥
ಗಣವೆಂತು ಘನವಧಿಕಮುಖ್ಯಾಗ್ರತಮಮುಖಾ ।
ಗ್ರಣಿ ಮಹತು ಶ್ರೇಷ್ಠಂಗಳಪ್ಪಂತೆ ಭರತಧಾ ।
ರಿಣಿಯು ನಾನಾದೇಶಕಿದು ಭಾಗ್ಯನಿಧಿಯೆನಿಸಿ ಚೋಳದೇಶಂ ಮೆಱೆದುದು ॥

ನರಕಬಂಧಂಗಳೆಂಬಿವು ಕೊಳಗುಳಂಗಳೊಳು ।
ಪರಿಕಿಸಲ್ಕಿಟ್ಟಿಯೇಱಿಂಬುದು ಮಹೀಜಕರಿ ।
ತುರಗಂಗಳೊಳು ದೇಹಿ ನಾಸ್ತಿ ಶಬ್ದಂಗಳಬಲಾಜನದ ಮಧ್ಯದಲ್ಲಿ ॥
ಅರಿಯೆಂಬ ನುಡಿ ಕೆಯ್ಗಳೊಳು ನುಡಿದು ತಪ್ಪುವುದು ।
ಗರುಡಿಯೊಳಗಱೆ ಮಱೆಗಳೆಂಬ ನುಡಿ ನಾಡೆ ಭೂ ।
ಧರಕುಲಂಗಳೊಳಿದಿರುದಲೆವಾತು ಕನ್ನಡಿಯೊಳಲ್ಲದಾನಾಡೊಳಿಲ್ಲ ॥

ವಿನುತಹಂಸಾವಳಿಯು ನದಿಗಳಿಂದಬ್ಜಮಯು।
ವೆನಿಸುವ ತಟಾಕಂಗಳಿಂ ಕುಜದ ಸಜ್ಜುಯಿಂ।
ದನುಪಮಬುಧರ್ಕಳಿರ್ಪಗ್ರಹಾರಂಗಳಿಂ ಗುರುಕುಲಾದ್ಯರ ಪುರಿಗಳಿಂ॥
ಘನಕವೀಶರ ರಾಜಧಾನಿಗಳಿನಸಿತಕಂ।
ತನ ನಗರಿಗಳಿನಹಿತವಿಧುರಾಹುವೆನಿಪ ಬಿರು।
ದಿನ ಕೇತುಮಯುಪತ್ತನಂಗಳಿಂ ದೇಶಂ ನವಗ್ರಹಾತ್ಮಕವೆನಿಸಿತು॥ ೬

ಸೂರಿಜನಹರ್ಷವಿಸ್ತಾರಿ ಸುಖಸಂಕಥಾ।
ಕಾರಿ ಬಳಿನಿರ್ದ*ಗಂ ಕತಾರಿ ಬೆಳಸಿರಿಯ ಭರ।
ಭಾರಿ ಕುಶ್ರಮಸಂಘವೈರಿ ಜಲಚರಸದಾಧಾರಿ ಕಾಲಾರಿಶಿವನ॥
ನಾರಿ ಗಂಗಾಂಬಾವತಾರಿ ದುರ್ದೋಷಸಂ।
ಹಾರಿಯೆಂದೊದಱುವತಿ ಭೇರಿಯಾರ್ಭಟಿ ವೀಚಿ।
ಧಾರಿ ಬಹುಮಾರ್ಗಪ್ರಚಾರಿಯಾನಾಡ ಕಾವೇರಿ ಭೋರ್ಗರೆದೆಸೆದುದು॥ ೭

ಮೂಡೆಗಟ್ಟಂ ಕಟ್ಟಿ ಹುಡುಕುನೀರೊಳ್ ಮೆಟ್ಟಿ।
ಕಾಡುತಿಹ ಪಾಮರರ ಕೈವಿಡಿತೆಗೊಳಗಾಗಿ।
ನಾಡೆ ಪಂಕವ ಪುಗುತ್ತಿರ್ದ*ಯೊಡೆದು ಪುಲ್ಗಚ್ಚಿ ಕಂಟಕಂಬಡೆದವಿನ್ನು॥
ರೂಢಿಸಿದ ಕಾವೇರಿಯಿರ್ಕೆಲನೊಳಿರ್ದು ಶಶಿ।
ಚೂಡಂಗೆ ಸಲ್ವ ಪೇರೊಲ್ಮೆಯಂ ಪಿಡಿದವರ।
ಕೂಡೆ ಬಾಯ್ಬಿಡಿಸದಿರೆವೆಂಬ ಕಳವೆಯ ಮುಡಿಯ ಸಾಲುಗಳು ಸಲೆ ಮೆಱೆದುವು॥ ೮

ನಡೆ ಮಂದವಾಯ್ತು ನಡುಗಡಸಿತ್ತು ಬಡತನಂ।
ನುಡಿ ಮೆಲ್ಲನಾಯ್ತು ಕಳವೆಯ ಮುಡಿಗಳಂ ಕಾವ।
ಮಡದಿಯರ್ಗೆನುತೆ ಮುತ್ತಿರ್ದುವು ತಲೆಯಂ ತುಂಬಿ ಕೋಕಂಗಳೆರ್ದೆ*ಯಡರ್ದು*ವು
ಅಡಿಗೆ ತೊಡಕಾದುವಂಚೆಗಳಿದೇ ಕಾಲವೆನು।
ತೊಡನೆ ಗಿಳಿವಿಂಡು ಗರ್ದೆಯ ಸೂಱೆಗೊಳೆ ಕಿತ್ತು।
ಪಿಡಿದು ಕರಕಂಜದಿಂದರಲ್ಚ* ನೆಯ್ದಿಲ್ಪೂವನಿಡುವರಾಶಶಿಮುಖಿಯರು॥ ೯

ಕಲ್ಲೆರ್ದೆ*ಯ ಕರಗದಂಗನೆಯರೆಮ್ಮಂ ಬಗೆವ।
ರಲ್ಲೆಂದು ಪಥಿಕರ ಮೊಗಂ ಕಂದಿ ಬಾಯ್ ಬತ್ತಿ।
ಮೆಲ್ಲನಾಗಲ್ ನಡೆಗಳುಸಿರ ಬಿಡುತಿರಲೆಣಿಸುತಾಸತಿಯರವರ ಕರೆದು॥

ಇಲ್ಲಿಗೈತರ್ಪನ್ನೆಬರ ನಿಮ್ಮ ಕುಱಿತು ಕೈ ।
ಯಲ್ಲಿ ಜೀವನವ ಪಿಡಿದಿರ್ದೆವೆನಲಳ್ಕುತವ ।
ರೆಲ್ಲ ಬಾಯ್ವಿಡಲಮೃತವೆರೆದಚ್ಚರಿಯರೆನಿಸಿ ಮೆಱೆಶದರಜವಟಿಗೆಗಳೊಳು ॥ ೧೦

ಅರೆವ ಚಂದನಕೆ ನಱುಸುಯ್ಗಂಪಿಗೆಱಪಳಿಗ ।
ೞುರವಣೆಗೆ ಸತಿ ರನ್ನದೊಡದೋಳನೆತ್ತುತಿರೆ ।
ಸುರಚಾಪವೆನಿಸಿತಲ್ತೆತ್ತಿದ ಕರವ ಬಳಸಿ ಪಿಂಛಾತಪತ್ರಗಳನು ॥
ಸ್ಮರಗೆ ಪಿಡಿದಂತಾಯ್ತುದಲ್ತು ನೀಲದೊಳು ಶಂ ।
ಬರವೈರಿ ಸಂಗ್ರಹಣಮಂ ಮಾಡಿ ಪಿಡಿಸಿದನೊ ।
ಗರುಡಿಯೊಳು ತರುಣಿಯುನದಲ್ತು ಕಾಮನ ಕರಾಗ್ರದ ಚಕ್ರವೆನಿಸಿತರರೆ ! ॥ ೧೧

ಸತತಮಿಂತೊಪ್ಪುತಿಹ ಚೋಳದೇಶದ ಸಮು ।
ನ್ನತಿಯ ಕೊಂಡಾಡುವೊಡೆ ಫಣಿರಾಜನೆಂಬ ವಾಗ್ ।
ಜ್ಞತೆ ಬೇಡ ಸಮುಸುಖದೊಳೆಸೆವ ಕೆಱೆತೊಱೆಕಾಲ್ಗಳುಪವನದ ಸಂಪತ್ತಿನಿಂ ॥
ಅತಿಪುಣ್ಯದಿಂದಲತಿನೀತಿಸನ್ಮಾರ್ಗದಿಂ ।
ದತಿಚತುರಸಾಮರ್ಥ್ಯವತಿಧರ್ಮದಿಂ ಧರ್ಮ ।
ವತಿಯೆಂಬ ಪಿರಿಯ ಪಟ್ಟಣಮೊಪ್ಪುತಿರ್ದುದಾನಾಡಸೈಪಿನ ಕರಂಡಂ ॥ ೧೨

ಉರಗೇಂದ್ರನಿಳೆಯು ಬಗಿದೆದ್ದು ತಚ್ಚೋಳಭೂ ।
ವರನ ಬಲಗೊಳಲಾದುದೋ ಪರಿಖೆಯೆನೆ ಫಣಿಪ ।
ನುರುಸುದರ್ಶನದ ವಿಮಲಾಂಗಸದ್ವೃತ್ತತೆ ಸಮುನ್ನತಮುದಾಯ್ತೆಂಬಿನಂ ॥
ಕರಮೆಸೆದುದಾ ಪಳಿಕುಗೋಂಟೆ ಮುಗಿಲಗ್ನಿಯೊಡ ।
ವೆರೆದ ಕೆಂಗದಿರ್ವ*ಣಿಯ ಪೆಡೆ ಪಲವರಿಂ ಸುತ್ತು ।
ವರೆ ನೋಟ್ಪಿನಹಿಪನೆನೆ ರನ್ನದೆನೆಗಳಿನೆಸೆದುದಾ ಪಟ್ಟಣಂ ಭಾವಿಸೆ ॥ ೧೩

ಅಳವಟ್ಟ ಸಾಧನದ ಸಂಪತ್ಕರಂಗಳಿಂ ।
ನಳಿನಸಖನಂತರುಣರಾಗಿ ಪೊಂಬೆಟ್ಟಗಳ ।
ಬಳಸುವ ವಣಿಗ್ವರರ ಸೈಪಿನಿಂ ಶಿವಭವನದೊಪ್ಪಂಗಳಿಂ ಭಕ್ತರ ॥
ನಿಳಯಂಗಳುರ್ವಿನಿಂ ಮಕುಟವರ್ಧನರ ಮಂ ।
ಡಳಿಕ ಮನ್ನೆಯರ ಗೇಹಂಗಳಿಂ ನಡುವೆ ಕಂ ।
ಗೊಳಿಪ ಹಿರಿಯರಮನೆಯೊಳಿರ್ಪನಾಸತ್ಯೇಂದ್ರಚೋಳಧರಣೀಪಾಲನು ॥ ೧೪

ಚರಣದೊಳು ಹೃದಯದೊಳು ಕೈಬಾಯ್ಗಳಲ್ಲಿ ಸೌಂ।
ದರದೇಹದಲ್ಲಿ ಮಣಿಜಿವಣಿಯಂ ಸುಗುಣಮಯ।
ಪರಮಚಿಂತಾಮಣಿಯ ಸುರತರುವನಮೃತಮಂ ಸೌಭಾಗ್ಯಮಂ ಪಡೆಯುತ॥
ಶರಣೆಂದ ರಿಪುಗಳ್ಗೆ ಮಿತ್ರರ್ಗೆ ಯಾಚಕರ್ಗೆ।
ಪರಮಾನುಭಾವರ್ಗೆ ಶರಣರ್ಗೆ ಸತ್ಯೇಂದ್ರ।
ನಿರದೀಯೆ ನಾಣ್ಚಿ ಭಾಂಡಿಕದೇಹಿಯಾಗಿ ಸಗ್ಗಂಬೊಕ್ಕನೋ ಸುರಪನು॥ ೧೫

ಲಾಳನಂ ಬರ್ಬರನ ಗೌಳನಂ ವೈರಿ ಪಾಂ।
ಚಾಳನಂ ಗೆಲ್ವ ಕರವಾಳನಂ ಭಸ್ಮಮಯ।
ಭಾಳನಂ ತತ್ಸದೋದ್ಧೂಳನಂ ರಂಜಿಸುವ ಕಾಳನಂ ಗೆಲ್ವ ವಿಧೃತ॥
ವ್ಯಾಳನಂ ನಮಿತಸುರಜಾಳನಂ ಹಸ್ತಕಂ।
ಕಾಳನಂ ಕೊರ್ಬಿರ್ದ ಕೋಳನಂ ಕೊಂದ ಸೊ।
ಡ್ಡಾಳನಂ ಭಜಿಪ ಭೂಪಾಳನಂ ಸತ್ಯೇಂದ್ರಚೋಳನಂ ಪೊಗಟಲಳವೆ॥ ೧೬

ಲಿಂಗಪೂಜೆಯ ಮಾಡುವಲ್ಲಿ ರತಿ ಸತ್ಯವಾ।
ಕ್ಯಂಗಳಂ ನುಡಿವಲ್ಲಿ ಸದ್ವಾಣಿ ನಿತ್ಯಹ।
ರ್ಷಾಂಗಿಯಪ್ಪುದಱಿಂದರುಂಧತಿಯ ಪಾಂಗು ಪಾವನಲಕ್ಷ್ಮಿ ತನ್ನೊಳಿರಲು॥
ಸಾಂಗರೂಪಂ ಪ್ರೌಢೆ ಪತಿಭಕ್ತಿ ಸಿರಿಗಳು।
ಳ್ಳಂಗನೆಯರಾಣ್ಮರಹ ಮದನನಜವಾಸಿಸ್ಮ।
ತುಂಗಹರಿಗಳ ಜಱಿವ ಸತ್ಯೇಂದ್ರಚೋಳಂಗೆ ಸತಿಯಮೃತವತಿಯಾದಳು॥ ೧೭

ಒಂದು ಚಂದ್ರನ ಮಾಡಿ ಮೊದಲದು ಕಳಂಕಾದು।
ದೆಂದಂಬರಕ್ಕಿಟ್ಟು ಮತ್ತೆರಡ ರಚಿಸಿ ರಾ।
ಕೇಂದುವಿನ ಷೋಡಶಾಂಶವನೀಶ್ವರಂಗಿತ್ತು ಸಪ್ತಕಲೆಯಂ ದೇಹಕೆ॥
ತಂದಿಟ್ಟು ಮಿಕ್ಕೆಂಟ ಪಣೆಗಿಟ್ಟು ಮೂಜಿನೆಯ।
ಚಂದಿರನ ಮೊಗದೊಳೊರಿಸಿದನೋ ಕಶ್ಯಪನ।
ತಂದೆಯಲ್ಲದೊಡೆ ಸತ್ಯೇಂದ್ರನಂಗನೆಗಮೃತವತಿಯೆಂಬ ಪೆಸರೆಸೆವುದೇ॥ ೧೮

ಸಲೆ ನಿರ್ಜರಾಧೀಶವೃದ್ಧಶ್ರವಂಗೆಯೊ।
ಪ್ಪಲು ಜೀವನಾಗಿ ಚಿತ್ರಶಿಖಂಡಿಜಂ ಮಂತ್ರಿ।
ತಿಲಕಂ ಗಡಾ ಹಾಸ್ಯ ಮಲ್ತೆಯಂತಲ್ಲ ಮಿಸುನಿಯ ಕೆಲಸದೊಳಗೆ ರನ್ನಂ॥

ಚಿಲುಪಾಲೊಳೆಸೆವ ತನರಾಜ ಪನಿನೀರೊಳೊಡ ।
ಗಲಸಿರ್ದ ಶಿರಪಜ್ಜೆ ಶಿವತತ್ತ್ವದೊಳು ಕೂರ್ತು ।
ನೆಲಸಿದಾಪ್ರಣವದಂತರಸಂಗೆ ಪತಿವೋಹಿಯೆನಿಪ ಮಂತ್ರೀಶನೆಸೆದಂ ॥ ೧೯

ಒಂದು ದಿನ ಸತ್ಯೇಂದ್ರಚೋಳಧರಣೀಶನಾ ।
ನಂದದಿಂ ವಾರಣಾಸಿಯೊಳೀಶ್ವರಂಗೆ ನಲ ।
ವಿಂದ ಭಾಗೀರಥಿಯ ಪಾವನೋದಕದಿನಭಿಷೇಕಮಂ ಮಾಡವೇಳ್ಬುಂ ॥
ಎಂದು ಗಂಭೀರಭೇರಿಯ ಮೊಱಗುವೇಳ್ದ್ದೊಡೈ ।
ತೆಂದೊಡೆಯನಂಘ್ರಿಪಂಕಜಕೆ ಪಣೆಯಂ ಸಚಿವ ।
ನೊಂದಿಸಿದನಿಟ್ಟ ಕುಂಕುಮಗಂಧರಜಮಾಪರಾಗದಂದವ ಪಡೆಯಲು ॥ ೨೦

ಕರಕಮಲವಂ ಮುಗಿದು ಜೀಯ ನೀವಿರ್ದ ಮಂ ।
ದಿರವಲಾ ಕಾಶಿಯಾತೀರ್ಥವೈತರ್ಪುದಿಂ ।
ದರರೆ ! ಭಾಗೀರಥಿಗೆ ಧರ್ಮವತಿಗೇಳ್ನೂರು ಗಾವುದದೊಳೆಡೆಗುಂದದೆ ॥
ವರಮಕುಟವರ್ಧನರ ನಿಲಿಸಲೊರೋರ್ವರ್ಗೆ ।
ಪರಮಜಲವಂ ಕನಕಘಟದೊಳೆಯ್ದಿಸಲು ಶಂ ।
ಕರನ ಪೂಜೆಯನೆಸಗಿದಂ ರಾಯನೆನಲುಱದ ಪಡೆಯನಿನ್ನಾರೆಣಿಪರು ॥ ೨೧

ಇಂತು ಸದ್ಭಕ್ತಿಸಂಪತ್ತಿಯಿಂ ಚೋಳಭೂ ।
ಕಾಂತನಿರಲೊಂದು ದಿವಸಂ ಬಂದನರರೆ ! ನಿ ।
ಶ್ಚಿಂತನಜ್ಞಾನಸುಜ್ಞಾನಕುಮುದಾಂಭೋಜತರಣಿಯತ್ಯಂತಕರುಣಿ ॥
ಕಂತುಹರಮೂರ್ತಿಯೀಬಂದಸೀಬಂದಂ ಕೃ ।
ತಾಂತಭಂಗಸುಸಂಗ ಚಿದ್ಘನಶಿವಾಚಾರ್ಯ ।
ರಿಂತು ಬಿಜಯಂಗೈದರೆಂಬ ಕಹಳೆಗಳೊದಱ ಕೇಳ್ದನಾನಂದದಿಂದ ॥ ೨೨

ಹಾ ಮಹಾದೇವ! ಬರ್ದು*ಕಿದೆನಲಾ ಮದ್ಗುರು ।
ಸ್ವಾಮಿ ಬಿಜಯಂಗೈದರೆಂದೆದ್ದು ಶಿವಗಣ ।
ಸ್ತೋಮದೊಡನಧಿಕಸಂಭ್ರಮದಿಂದೆ ಪೊಱಲ ಸಿಂಗರಿಸವೇಳ್ದೊಡನೆ ನಡೆದು ॥
ಕಾಮಿತಪ್ರದನ ಸಾಲೋಕ್ಯದಿಂ ಪದದಗ್ರ ।
ಧಾಮಗುರುವರನ ಸ್ವಚ್ಛಂದ ಗುರುಕುಲಲ ।
ಲಾಮನಂ ಕಂಡನಾಚೋಳಧರಣೀನಾಥನತಿಶಯಾನಂದದಿಂದ ॥ ೨೩

ಕಂಡು ಶುಭಚಿಹ್ನಾಂಗನಾತ್ತೆ ಸಾಷ್ಟಾಂಗ।
ದಂಡಪ್ರಣಾಮಮಂ ಮಾಡಿ ಗುರುಪದವಿಡಿಯ।
ಲಂಡಲೆವ ಮಾಯೆಯೆರ್ದೆ*ಯೊಡೆವ ಗಂಭೀರವಚನದಿ ಪರಸಿ ಕಣ್ಬೊಳೆಯಲು॥
ಮುಂಡಾಡಿ ನೋಡಿ ಭಸಿತವನಿಟ್ಟುರುದ್ವಿಜರ।
ತಂಡ ಸುರಿವಕ್ಷತೆಯೊಳೆಲೆ ಕಂದ ಬಾರೆಂದು।
ಕೊಂಡಾಡಿ ಕಱೆದಂ ಕೃಪಾಮೃತದ ಸೋನೆಯಂ ಚಿದ್ಘನಶಿವಾಚಾರ್ಯನು॥ ೨೪

ಪರಮಸಂಭ್ರಮದಿ ಪುರವೀಧಿಯೊಳು ಬರ್ಪ ಧೀ।
ವರನನೀಕ್ಷಿಸಿ ಮುನ್ನ ಗೇಹಮಂ ಪೊಕ್ಕು ಕು।
ಕ್ಕುರಗೆ ಶಿವಮುದ್ರೆಯಂ ಮಾಡಿ ಕೂಡಿರೆ ಮಟ್ಟಿಗರು ಜಱೆಯೆ ವೇದಂಗಳಾ॥
ಬರೆಯಿಸಿದನದಱೊರುಮುಕ್ಕಾಳುವಾರು ತ।
ದ್ಗುರುಕುಲೋದ್ಭವ ಚಿದ್ಘನಾರ್ಯರಡಿಗಂಡೆವೈ।
ಹರ! ಮಹಾದೇವೆಂದು ನೀಲಕಂಠನ ಭಕ್ತರೈದೆ ನಲಿಯುತ್ತಿರ್ದರು॥ ೨೫

ಶರಣರುಘೆ! ಚಾಂಗು! ಬೊಲ್ಲೆನಲು ಪೊಂಬಲ್ಲಕಿಯ।
ಹರಿಸದಿಂದಿೞದರಸನಟ್ಟ ಮಣಿಪಾವುಗೆಯ।
ಚರಣದೊಳು ತಳೆದು ಮೇಲುಪ್ಪರವದಾರೆಂಬ ತಾರ್ಕಿಕರ ಘೋಷಣದೊಳು॥
ಅರಮನೆಯ ಪೊಕ್ಕು ಪದಕೆಱಗಿದ ನೃಪಾಂಗನೆಯ।
ಪರಸಿ ಶಿವಲಿಂಗಪೂಜೆಯನೆಸಗಿ ಸಿಂಹವಿ।
ಷ್ಟರವನೊಲ್ದೇಱ ಭಕ್ತರೊಳೆಸೆದು ಶಿಷ್ಯನೊಡನೆಂದನಾಗುರುರಾಯನು॥ ೨೬

ನಿನಗಿಷ್ಟವೇನೆನಲು ಜೀಯ ನಿಮ್ಮಂಘ್ರಿದ।
ರ್ಶನವೆನ್ನ ದೋಷತಿಮಿರಜ್ಯೋತಿಯೆನ್ನಜೀ।
ವನಚಾತಕಕ್ಕೆ ಕಾರ್ಮುಗಿಲನಿಯಲಾ ನಿಮ್ಮ ಕರುಣರಸವಿನ್ನು ಬೇಱೆ॥
ಘನವಸ್ತುವುಂಟೆ ನೀವೇ ಶಿವಂ ಗುರುವೆ ಕೇ।
ಳೆನಗೆ ನಿಮ್ಮಮಲಬೋಧೆಯ ನಿರೂಪಂಗೆಯ್ವು।
ದೆನಲು ಕಣ್ಗೆಸೆವ ಶಿವತತ್ತ್ವಮಂ ಪೇೞ್ದರಾ ಚಿದ್ಘನಶಿವಾಚಾರ್ಯರು॥ ೨೭

ಪರದೈವಭಜನೆಗಳನಿಂದ್ರಿಯಾರ್ಥಂ ಮಾೞ್ಪ।
ನರರ್ಗೆ* ಕಂಟಕಮಪ್ಪುದೆಂಬುದಂ ಸೂಚಿಸುವ।
ಪರಿಯೊಳಾಶುಕ್ಲತ್ವಮಂ ತೊಱೆದು ಕೃಷ್ಣಪಕ್ಷವನೆ ಸಾರ್ದಾಕಾರಣಂ॥

ಅರರೆ! ದೋಷಾಕರಂ ಜಡನಾಗಿ ಬೀದಿಯೊಳು।
ಕರ ಬಟಲಿ ಮೆಯ್ಯೆಲ್ಲ ಬೆಳ್ಪಾಗಿ ತನ್ನ ತಾ।
ಯ್ವೆರಸಿ ಪೆರ್ಚುತ್ತ ಕುಂದುವ ಚಂದ್ರನೆನಸಲನ್ಯದೈವವಂ ನೆನೆಯ ಬಹುದೇ॥ ೨೮

ಪತಿ ಹರ್ಯಜಾದ್ಯಗರ್ಗಜಾಂಡಕುಲರಕ್ಷಕಂ।
ತ್ರಿತಯಮುಱಿವಮಲಯೋಗಿಗಳ ಜಾನಂ ಕುಱಿತು।
ಸತತ ಷಟ್ತ್ರಿಂಶತ್ಪರಂ ತತ್ತ್ವಚಿದ್ಘನನ ನಿಷ್ಕಲನ ಶಿವನ ಕೂರ್ತು॥
ನುತನಿರಾಕಾರಸಾಕಾರದ ಸದಾಶಿವಾ।
ಕೃತಿಯ ತಳೆದಾತನ ಮಹೇಶನಾ ಪಂಚವಿಂ।
ಶತಿಲೀಲೆಯುವನೊಱಿವೆನೆನಲೊಡನೆ ರೋಮಾಂಕಚೋಳನಾದಂ ಚೋಳನು॥ ೨೯

ಎಲೆ ದೇವ ದೋಷಾಕರನ ಪಿಡಿಯಲದು ನಿನ್ನ।
ತಲೆಗೆ ಬಂದತ್ತು ಸರ್ವರ ಸುಡುವ ಬಿಸವನಾ।
ನಲೆ ನಿನ್ನ ಕಂಠೋದ್ಗತಕ್ಕೆ ಬಂದುದು ನಾಡೆ ದುರ್ಲಕ್ಷ್ಯಮುಪ್ಪ ಖಲರ॥
ವಿಲಗದೂರುಗಳ ಮೂಱಿಂ ನೋಡೆ ನಿನ್ನ ನಿ।
ಶ್ಚಲನಯನದೊಳಗಂಬು ಮೂಡಿದುದು ಮಚ್ಚಿತ್ತ।
ನಿಲಯದೊಳೆ ಹದುಳವಿರಲಿಂ ಬಾಧೆಯಿಲ್ಲ ಕೇಳಮರಗುಂಡಾಧೀಶ್ವರಾ॥ ೩೦

ಇದು ಸಕಲಭಕ್ತಪದಪಂಕೇಜರೇಣುಮು।
ಸ್ತದ ಮಲ್ಲಣಾರ್ಯನಾಚೇರಮಾಂಕಂಗೆ ಬೆಸ।
ಸಿದ ಭಕ್ತಸತ್ಯೇಂದ್ರಚೋಳಕೃತಿ ಭಾವಚಿಂತಾರತ್ನವಮಲಕರ್ಣ॥
ಹೃದಯಮುಸ್ತಕವದನಸರ್ವಾಂಗಸೌಖ್ಯಕಾ।
ಸ್ಪದಮುಖಿಳಸುಜನರ್ಗೆ ಪಂಚಾಕ್ಷರಿಯ ಮಹ।
ತ್ವದ ಬೋಧೆಯೆಂದೋದಿದೊಡೆ ಕೇಳಿದರಿಗಿಷ್ಟಸಿದ್ಧಿ ಸರ್ವರಿಗಪ್ಪುದು॥ ೩೧

ಎರಡನೆಯ ಸಂಧಿ ಸಮಾಪ್ತಂ

——o——

## ಮೂಱನೆಯ ಸಂಧಿ

ಪಲ್ಲವಿ॥ ನಾದಬಿಂದುಕಳಾಗ್ರಗುರು ಬಂದು ಜೋಳಗೊರೆ।
ದಾದಿದೇಶಿಕಲೀಲೆ ಪಂಚವಿಂಶತಿಯಂ ಪ್ರ।
ಸಾದಮಂ ಕುಡಲಮೃತವತಿಗೆ ಸಂಭವಿಸಿತ್ತು ಮಂತ್ರಲಕ್ಷಕನ ಗರ್ಭಂ॥

ಇಂದುಶಿಲೆ ಮಂಟಪದಿ ಹೇರಂಬ ರೋದಿಸಲ್।
ಕಂದ ಬಾಬಾ ಎನಲ್ ಗುಹ ಕಣ್ಣಲುಗಿ ತಮ್ಮ।
ಯೆಂದೆನೆ ಕುಮಾರ ಜೇಷ್ಟಿಸುವುದೇನೆನಲು ಮದ್ದ್ರೃಕ್ಸಂಖ್ಯೆಗೆಯ್ದನೆನಲು॥
ಉಂದುರಾಸನಚರಿತನೆಂದ ಮೇಣ್ ಶಕ್ತಿಧರ।
ಗೊಂದು ತಪ್ಪುಂಟಮ್ಮ ಮನ್ನಾಸವೆಱಿದನೆನೆ।
ಮಂದಸ್ಮಿತದೆ ಕುವರರಂ ವೀಕ್ಷಿಸುವ ಶರ್ವಸತಿ ನೀನೆ ಪೊರೆವುದೆಮ್ಮಂ॥ ೧

ದೇವಿ ದಾಕ್ಷಾಯಣಿಯು ಪರವಸ್ತುವಿಂ ಪಡೆಯು।
ತಾವಿಭುವಿಗಿತ್ತು ಪೆಣ್ಮಣಿಗಳಂ ಕುಡೆ ಸುರರ್।
ಮೂವತ್ತುಮೂಱುಕೋಟಿಗಳಳಿಯರೆನಿಸಲಿರ್ಪತ್ತೇೞು ಸುತೆಯರರಸ॥
ಆವನಿತೆಯರನನಯದಿಂದಾಳೆ ದಕ್ಷಪ್ರ।
ಜಾವರಂ ಶಪಿಸಲಾಚಂದ್ರನರ್ಚಿಸೆ ಶಿವನು।
ಮಾವಿಮಲರೋಚಿಯಂ ಧರಿಸಿದನಲಾ ಜೋಳ ಕೇಳೆಂದ ಗುರುರಾಯನು॥ ೨

ಪರಮಶಿವತತ್ತ್ವಕ್ಕೆ ಪ್ರಣವ ಕುಸುಮಕೆ ಗಂಧ।
ವರಫಳಕೆ ರುಚಿ ದಿವ್ಯರತ್ನಕ್ಕೆ ಸತ್ಕಾಂತಿ।
ಯೆರವಿಲ್ಲದಂತೆ ಪತಿಯಾದಿಯಿಜ್ಯಾಜ್ಞಾನತತ್ಕ್ರಿಯಾಶಕ್ತಿರೂಪ॥
ಧರಿಸಿ ಶಾಂಭವಲೋಕಪತಿಯಪ್ಪ ತನ್ಮಹೇ।
ಶ್ವರಗನನ್ಯದ ವನಿತೆಯುಮೆಯಾಗಲದುವೆ ಪಂ।
ಕರುಹಗರ್ಭಾಂಡಕೋಟಿಗಳುದಯಕಾರಣದ ಲೀಲೆ ಕೇಳ್ಬೆ ಯೆಂದನು॥ ೩

ಸರ್ವಲೋಕಂಗಳಂ ವಿಲಯವೈದಿಸುತ ಹರ।
ನೊರ್ವನೇ ನಿಂದು ಯೋಚಿಸಿ ತನ್ನ ಧರ್ಮವನ।
ಪೂರ್ವರೂಪಂ ಮಾಡೆ ಸತ್ಪ್ರಣವವೇದಪೌರಾಣಾಗಮಾಂಗನಾಗಿ॥

ಗೀರ್ವಾಣರಂ ತನ್ನ ನಾಸಿಕೋಚ್ಛ್ವಾಸಗಳ ।
ಗುರ್ವಿನಿಂದಾಡಿಸುತ್ತಿರ್ಪರ್ವ*ಟ್ಟಿಗರ್ಗೆ* ಚಾ ।
ತುರ್ವಿಧದ ಪುರುಷಾರ್ಥಫಲದ ವೃಷಭಂ ಶಂಕರಂಗೆ ವಾಹನವಾದನು ॥ ೪

ಆಲೋಕಮಾತ್ರದಿಂದಖಿಳಮಂ ಸುಟ್ಟುರುಹಿ ।
ಮೇಲೆ ಡಮರುಧ್ವಾನದಿಂದೊಡೆದಜಾಂಡವಮಂ ।
ಕೀಲಕಾದಿಗಳ ಪದಹತಿಯಿಂದೆ ನುರ್ಗಿ ತಿಟ್ಟನೆ ತಿರುಗಲಹಿ ಮೊಱೆಯಿಡಲು ॥
ಫಾಲಾಗ್ನಿಯಿಂದಿಂದು ಕರಗಲಮೃತದಿನಸ್ಥಿ ।
ಮಾಲೆ ಜೀವಂಬಡೆಯೆ ಸೃಜಿತಾಜಕೃಷ್ಣೇಂದ್ರ ।
ಜಾಲವೆನಲೆಸೆವ ನಾಟ್ಯಾಡಂಬರದ ಶಿವನ ಲೀಲೆಯಂ ಕೇಳೆಂದನು ॥ ೫

ಹರನಿಂದೆಯಂ ಕೇಳ್ದು ಯಜ್ಞದೊಳ್ ತನುವಟಿದು ।
ಗಿರಿರಾಜನಂಗನೆಗೆ ಮಗಳೆನಿಸಿ ಬಳೆದು ಬಂ ।
ದುರುಹಂಪೆಯಲ್ಲಿ ತಪವಿರ್ಪ ಶಿವನಂ ಭಜಿಸಲುಮೆಯಿತ್ತ ವಿಷ್ಣುಮುಖ್ಯ ॥
ಸುರರು ತಾರಕಗಳ್ಕಿಕಳುಪೆ ಬಂದೆಚ್ಚೊಡಾ ।
ಸ್ಮರನ ಸುಟ್ಟಂಗಭವನೆನಿಸಿ ತಪಿಸುವ ಶಿವೆಗೆ ।
ವರದನಾಗುತೂರ್ಗೆ ಕಳುಪಿ ವಿಭವದೊಳಗಜೆಯಂ ಮದುವೆಯಾದನೀಶಂ ॥ ೬

ಶಿವನುಗ್ರಮೂರ್ತಿ ಘುಡಿಘುಡಿಸುತ್ತ ವೈಕುಂಠ ।
ಕವಗಡಿಸಿ ನಡೆದು ವಿಷ್ವಕ್ಸೇನನಾಂತೊಡಿಱ ।
ದವನ ಶೂಲಕೆ ಸಾರ್ಚಿ ಪುಗೆ ವಿಷ್ಣುವಭವನಖಮುಕುರಪದಕೆಱಗುತೆನ್ನ ॥
ತ್ರಿವಿಧಸಪ್ತಕಜನ್ಮಸಾಫಲ್ಯವೆಂದು ಕಂ ।
ಭವನೆ ಪಾಯಲ್ ತಲೆಯ ರುಧಿರವುಗಲೆಱೆಯೆ ಪೊರೆ ।
ದವನ ದಿಕ್ಪಾಲಲೋಕವ ತಿರುಗಿ ಬಂದುದೇ ಹರನ ಭಿಕ್ಷಾಟನ ಕಣಾ ॥ ೭

ಸುರನಿಕರಮಾತಾರಕಂಗಳ್ಕಿ ಕಾಮನಂ ।
ಹರನ ತಪಮಂ ಕಿಡಿಸಲೆಂದಟ್ಟೆ ಗಿಳಿಗುದುರೆ ।
ದುರುಳತುಂಬಿಗಳೊಡನೆ ತಾವರೆಯ ನೂಲ್ದಿಱುಮಿಗಿನಿವಿಲ್ಲನರಲಂಬನು ॥
ಅರರೆ ! ಪೂಡುತ್ತೆಚ್ಚೊಡೋತು ತಪಮಂ ಮಾಳ್ಪ ।
ವರತಪ್ತಜಾಂಬೂನದಾಂಗ ನಾಗಾಜಿನೋ ।
ತ್ತರವಸನಯಂತ್ರವಾಹಕ ಭಾಳನೇತ್ರನವನಂ ಸುಟ್ಟು ಭಸಿತವಿಟ್ಟಂ ॥ ೮

ವರಸತಿಯ ಮುಡಿಗೆ ತರ್ಪಲ್ಲಿ ಯೂಥಿಕೆಯದೊಂ ।
ದರಲವನಿಯೊಳು ಬೀೞಿ ಶಂಭುಗೆಂದುದಱಿಂದ ।
ಸುರಪುರವನಾಳ್ದರಂಭೆಯ ಬೋಧೆಯಿಂದ ಶುದ್ಧಸ್ಫಟಿಕಸಂಕಾಶನ ॥
ಚರಣಮಂ ಶ್ವೇತನರ್ಚಿಸಲವನ ಪಿಡಿಯೆ ಬಂ ।
ದುರವಣಿಪ ಕಾಲನಂ ಹೊಳೆವಾತ್ರಿಶೂಲದಿಂ ।
ದಿರದಿಟ್ಟು ಮಡಿದಾತನಸುವಿತ್ತು ಬೋಧಿಸುತ್ತಿಟ್ಟದಂ ಸರ್ವೇಶನು ॥ ೯

ಸಿರಿಯೊಡೆಯ ಕೋಲ್ಗಱಿಯ ಪೆರ್ವಕ್ಕೆಗೆಲರುಣಿಯ ।
ನೞಿಸುತಿರೆ ಕಂಗೆಟ್ಟು ಸರಿಗೆನ್ನದಾ ಪಾವಿ ।
ಗಿರದಮರ್ದು*ಗಯ್ಯನೇಸರ್ಗಾಲಿಗಳು ನಡುಗಿ ಬೀೞೆ ತೇರ್ ಕೆಡೆವುದೆಂದು ॥
ಪರಿಕಿಸದೆ ಕೋಲ್ಮುದಿಯ ಕಿಚ್ಚಿಗಾ ಪೊನ್ನಸಿಂ ।
ಗರವೆಟ್ಟುವಿಲ್ ಕರಗುಗೆಂದಳ್ಕದದಟ ಮು ।
ಪ್ಪುರಮಂ ವೆಱಂ ಸುಟ್ಟ ಕಡುಬಿರುದನಮರಗುಂಡದ ಮಲ್ಲಿನಾಥ ಶರಣು ॥ ೧೦

ವೃತ್ರಕುಲಭವಜಲಂಧರನಿಷ್ಟಮಂ ಪಡೆದು ।
ಧಾತ್ರನಿಂದವನ ಭಂಗಿಸಿ ನಡೆದು ಕಾದಿ ಮುರ ।
ಶತ್ರುವಂ ಪಿಡಿದು ಫಣಿಪಾಶದಿಂ ಕಟ್ಟಿ ಗಗನಕ್ಕಿಟ್ಟು ಸುರರ ಸದೆದು ॥
ಚಿತ್ರಮೆನೆ ಶಿವಪುರಿಗೆ ದಂಡು ಬರೆ ಹರನಗ್ನಿ ।
ನೇತ್ರದಿಂದುರುಹಿ ಜಲವಂ ಚಕ್ರಮಂ ಬರೆವ ।
ಮಾತ್ರಕಸುರನ ತಲೆಯ ಶೀಘ್ರಗತಿಯಿಂದಱಿಯೆ ತಳೆದನಾಶಿರವನಭವಂ ॥ ೧೧

ಮಾರವೈರಿಯ ದಕ್ಷಿಣಾಂಗದೊಳ್ ಜನಿಸಿ ವಿಧಿ ।
ಮೇರುವಗ್ರದೊಳಾಪ್ತರೊಡನಹಂಕರಿಸುತಾ ।
ಶೌರಿವೇದಗಳ ನುಡಿಗಳ ಮೀಱಿ ಶಿವನಿದಿರೊಳುಲಿಯೆ ಪಂಚಮಶಿರವನು ॥
ಭೈರವಾಕಾರದಿಂ ಪಱಿದು ಗುರುಶಿಕ್ಷೆದೀ ।
ಕ್ಷಾರತಿಯೊಳವನ ಮಸ್ತಕದೆಡೆಗೆ ಕೈಯಿಟ್ಟ ।
ನೈ ರಾಯ ಕೇಳು ಸೋಮಾಷ್ಟಕವನೆಂದು ಬಿತ್ತರಿಸಿದನು ಗುರುರಾಯನು ॥ ೧೨

ಮೃಡನ ಸಭೆಯಿಂದ ಮನ್ನಣೆವಡೆದು ಯಜ್ಞಮಂ ।
ತೊಡಗೆ ದಕ್ಷಂ ದಧೀಚಿವ್ರತಿಯು ಶಪಿಸಲುಮೆ ।
ಯೊಡನೆ ನಾರದನಱಿಪೆ ಪೋಗಿ ಶಿವನಿಂದೆಗೇಳ್ದೊಡಲಟೞಿಯೆ ಹರನಱಿಯುತೆ ॥

ನಡುಗಣ್ಣಿನಿಂದ ಬೀರನ ಪೆತ್ತು ಕಳುಪೆ ಘುಡಿ ।
ಘುಡಿಸಿ ದೋಸಿಯ ತಲೆಯ ಹೊಡೆದಗ್ನಿಯೊಳಗಾರ್ದು ।
ಕೆಡಹಿ ಕುಱಿದಲೆಯಿತ್ತನವಿಚಾರವವಿಚಾರಕೀಡಾಗದೆಂತಿರ್ಪುದು ॥ ೧೩

ಅಮರರೊಳು ಕಾದಿ ರಕ್ಕಸರು ಕೆಟ್ಟೋಡಲಾ ।
ಕ್ರಮಿಸಿ ಪಿಂದಟ್ಟೆ ಮುನಿಪತ್ನಿ ದಿವ್ಯಾದೇವಿ ।
ಯಮದರ್*ಡ್ಡವಾಯಲಾಕೆಯ ತಲೆಯನರಿಯೆ ಭೃಗು ಶಪಿಸಲದಱಿಂ ವಿಷ್ಣುವ ॥
ಕ್ರಮದೆ ಬಕ ಧೀವರ ನಿಜಾಂಗ ಶರಭತ್ವದಿಂ ।
ದಮೆ ತೀರ್ಚಿ ತತ್ಸಿಂಹಮಂ ಕೂರ್ಮೆಯಿಂ ತಳೆದು ।
ಹಿಮಪೃಷ್ಟಿಶೇಖರಂ ನರನಿಷ್ಟದಾತಪಂಚಾನನಂ ಮೆಱೆದನಂದು ॥ ೧೪

ಕ್ಷೀರಶರಧಿಯೊಳು ಹರಿ ಮಲಗಿರ್ದೊಡಾವೇಳೆ ।
ವಾರಿಜೋದ್ಭವನೈದಿ ಯುದ್ಧಮಂ ಮಾಡಲಾ ।
ಶೌರಿಯಜರಿಸಲೆರಡು ಪಾಶುಪತಬಾಣದುರಿಯಿಂ ಜಗಂ ಬೇಯೆ ನಡುವೆ ॥
ಮಾರಾರಿಯುರಿಲಿಂಗವಾಗಿ ಕುಳಿರ್ವೆಟ್ಟನ ಕು ।
ಮಾರಿಯೊಡನರ್ಧನಾರೀಶತ್ವದಿಂದೊಳಗೆ ।
ರಾರಾಜಿಸುತ್ತವರ ಸಲಹಿ ತಂಪಂ ಜಗಕೆ ಬೀಱಿದಂ ಚಂದ್ರಧರನು ॥ ೧೫

ವಾರಿಜೋದ್ಭವನಾತ್ಮಸುತೆಗಳುಪಿ ಮೃಗಿಯಾಗಿ ।
ನಾರಿಯೋಡುತ್ತಿರಲ್ ಹರಿಣನಾಗುತ್ತಲಾ ।
ಭಾರತಿಯ ಬೆಂಬತ್ತಿ ರಮಿಸುವಿನಮವಳಭವನಂ ನೆನೆಯೆ ವೇದಂಗಳು ॥
ಸಾರಮೇಯಗಳಾಗಿಯಾಘ್ರಾಣಿಸುತ್ತಡಿಯ ।
ದಾರಿವಿಡಿದೈದೆ ಶಬರಾಕೃತಿಯೊಳಾವಿಧಿಯ ।
ನಾರಿ ತಲೆ ಪಱಿಯಲೆಚ್ಚಂ ಮುನಿದಿಗೀಶನೆನಿಸುವ ಕಿರಾತಾದಿರುದ್ರಂ ॥ ೧೬

ಬಂದು ಬಲಿಯಂ ಭೂಮಿಯಂ ಬೇಡಿ ಪಡೆದು ಬೞಿ ।
ಕೊಂದು ಕಾಲಂ ಸತ್ಯಲೋಕಕ್ಕೆ ನೀಡಲರ ।
ವಿಂದಭವನಿಟ್ಟ ಮಂತ್ರೋದಕದಿನುಡಿದಲ್ಲಿ ಸಿಲ್ಕಲದು ತದ್ವಿಷ್ಣುವ ॥
ಮಂದಿವಾಳವ ತೀರ್ಚಿ ಬೆನ್ನೆಲುವ ಮುಱಿದವಂ ।
ಮುಂದಕ್ಕೆ ತಲೆವಾಗಿ ನಡೆವುದಕೆ ಹರಿ ತನ್ನ ।
ಹಿಂದ ನೆನೆದಿರಲೆಮ್ಮ ಸನ್ನಿಧಿಯೊಳೆಂದು ಕಂಕಾಳಮಂ ಪಿಡಿದನಭವಂ ॥ ೧೭

ಕೀಲಾರವಂ ಕಾವ ಕಾಲದೊಳು ಮಣಲಿಂ ಮು ।
ಹಾಲಿಂಗಮಂ ಮಾಡಿ ಲೋಲತೆಯಿನರ್ಚಿಸುವ ।
ಬಾಲಚಂಡನ ತಂದೆಯಾಲೋಕಿಸುತ್ತೊ‍ದೆಯೆ ಶೂಲಿಯಂ ತಂದೆ ಬೞಿಕ ॥
ಸ್ಥೂಲಪರಶುವನಾಕಪಾಲಿಯಿಂ ಪಡೆದವನ ।
ಕಾಲ ಕೀಲರಿಯೆ ಪೊಡೆದಾರಲಭವಂ ಮೆಚ್ಚಿ ।
ಕೈಲಾಸಕುಯ್ದೊಡೆ ವಿಶಾಲಗಣತತಿಯಿರ್ಪ ಸಾಲೊಳಾಶರಣ ಮೆಱೆದಂ ॥ ೧೮

ಶೂಲಿ ಸೂಡಿದ ಪುಷ್ಪಮಾಲೆಯಂ ದುರ್ವಾಸ ।
ಲೋಲಮುನಿ ಕುಡೆ ಸಿತವ್ಯಾಲಕುಂಭಕ್ಕಿಟ್ಟೊ ।
ಡಾಲೇಖವಲ್ಲಭಸ್ಥೂಲಭಾಗ್ಯಂ ಪೋದ ಕಾಲದೊಳಗಸುರಸುರರ ॥
ಶೈಲದಬ್ಧಿಯ ಮಥನವೇಳೆಯೊಳಗಹಿವಿಷ ।
ಜ್ವಾಲೆಯಿಂ ಬೇವ ಬಲಮೂಲದನಿಮಿಷರ ಭಯ ।
ಜಾಲಮಂ ಪಱಿದುಗ್ರಹಾಲಾಹಲಮನರರೆ ! ಶೂಲಿ ಕಂಠದೊಳೆ ತಳೆದಂ ॥ ೧೯

ಆಜಲಪ್ರಳಯಕಾಲದೊಳು ಹರ್ಯಜರತಿ ।
ವ್ಯಾಜದಿಂ ಪಟಿಚಲುದಯಿಸಿದ ಲಿಂಗದ ಮಹಾ ।
ತೇಜಸ್ಸು ತತ್ಸಮುದ್ರದ ಬಡಬನಂತೆಸೆಯಲೆಡಬಲದೊಳಿಂದ್ರನೀಲ ॥
ಯೋಜಿಸಿದ ತತ್ಕನಕಪುಷ್ಯರಾಗಂಗಳವೊ ।
ಲಾಜನಾರ್ದನವಿಧಿಗಳಿರೆ ಚಕ್ರಶಂಖಗಳ ।
ನಾಜಲಧಿಯಾವರ್ತಶಬ್ದಂಗಳೆನಲಿತ್ತನಭವನಂದಾವಿಷ್ಣುಗೆ ॥ ೨೦

ಮಿಸುಪ ವಿದ್ಯೆಯ ಮೊಗದ ಕೈಯುಳ್ಳದಾನಮಯ ।
ರಸಿಕಂಗೆಯಾಚಾರಗುರುಸಮರ್ಪಣೆಯ ಸಂ ।
ಧಿಸುವ ಗಣಪಂಗೊರೆವೆನೆಂದು ನಾನಾಶಾಸ್ತ್ರಮಂ ದೇವರಾದಿತ್ಯನು ॥
ಒಸೆದು ನಿರವಿಸೆ ಕೇಳ್ದದಿವನ ಪೊಡೆಯಂ ಬಳಸೆ ।
ಸಶಿವಪ್ರಸಾದಿಯಾನೆಂಬ ಫಣಿ ಬಂದು ರಂ ।
ಜಿಸುವ ಕುಕ್ಷಿಯ ಕುಮಾರನ ನೋಡಿ ಹರ್ಷಿಸುವನಭವನೆಲೆ ಚೋಳ ಕೇಳ್ಕೆ ॥ ೨೧

ಮನವೊಲ್ದು ಶಿವನಗಜೆಯಂ ರಮಿಸುತಿರೆ ಸುರರು ।
ದನುಜಭಯಕಗಿದಗ್ನಿಯಂ ಕಳುಪೆ ಬಂದು ಶಾಂ ।
ಭವನ ವೀರ್ಯವ ಕೊಳಲು ಗರ್ಭವಾಯ್ತಮರರುದ್ಧಾರಿಸಲು ಶರವಣದೊಳು ॥

ಅನಲಸಂಬಂಧ ಕೃತ್ತಿಕೆಯೊಳೊಗೆದಾಷಡಾ ।
ನನನನಾಗಿಸಲಿಂದ್ರನಂ ಜಯಿಸಿ ಸೇನಾನಿ ।
ದಿನವೇಟಱೊಳು ತಾರಕಾರಿಯಾದಂ ಚಿತ್ರಭಾನು ಭೂವಾದ ಕತದಿಂ ॥ ೨೨

ಪರಶಿವನ ಧರ್ಮವೇ ವೃಷಭನಾಕಾರದಿಂ ।
ದೆರಡನೆಯ ಶಂಭುವೆನಿಸುವ ಬಿಣ್ಪಿನಿಂದ ಬಂ ।
ದುರಕೃತಯುಗಂ ತ್ರೇತೆಯುಂ ದ್ವಾಪರಂ ಕಲಿಯುಗಂಗಳೊಳು ನಾಲ್ಕು ಮೂಱು ॥
ಪರಿಯಾಯದೆರಡೊಂದು ಪಾದಗಳು ನಿಲ್ವಿನಂ ।
ಧರಿಸಿ ಪುರುಷಾರ್ಥಂಗಳೊಳು ಮೋಕ್ಷಮುಖ್ಯವೊಂ ।
ದರಸ ಕೇಳಂತೆ ಮೆಱೆವೇಕಪಾದದ ಶಿವನ ಲೀಲೆಯೆಂದಾರ್ಯನೊರೆದಂ ॥ ೨೩

ಗೌತಮಂ ಕ್ಷಾಮದೊಳು ಪಾರ್ವರಂ ಸಲಹಿ ಬಱಿ ।
ಕಾತಂಗೆ ಗೋವಧೆಯನವರು ಕಲ್ಪಿಸೆ ಪಡೆದ ।
ಜಾತನಿಂ ಗಂಗೆಯುಂ ಮರಳಿ ಶಪಿಸಲು ನೀಚದರ್ಶನಗಳಾಗೆ ಖಲರು ॥
ಸೋತಾಕ್ರಿಯಾಜ್ಞಾನಿಯಕ್ಷಪಾದಂಗಭವ ।
ನೋತು ನಿರವಿಸೆ ನಂದಿಯೇ ಸುಖಾವಹಮೂರ್ತಿ ।
ನೂತನಾಚಾರ್ಯಂಗೆ ನಯನತ್ರಯಂ ಬೋಧೆಯಿಂದೆ ರಕ್ಷಿಸಿದನವರಂ ॥ ೨೪

ದಾರುವನದೊಳು ಭಿಕ್ಷು ಶಿವನ ಮೇಲಂದಪ ।
ಸ್ಮಾರಫಣಿಡಮರುಮುಖ್ಯವನಟ್ಟಿ ಮುನಿಗಳದ ।
ಮಾರಾರಿಯಳವಡಿಸಿಕೊಂಡು ತಾಂಡವಮನೆಸಗುತ್ತೆ ಬಯಲಾಗಲವರು ॥
ಸಾರಿ ಕೀರ್ತಿಸೆ ವಟದ ಮೊದಲೊಳು ತ್ರಿಣೇತ್ರಕೋ ।
ಟೀರಾದಿಯಿಂ ದಕ್ಷಿಣಾಮೂರ್ತಿ ತನ್ಮುಖಸ ।
ರೋರುಹಗಳಲರೆ ಪುಸ್ತಕವಿಡಿದು ನೋಡಿ ಬೋಧಿಸಿ ಪೊರೆದನಾರುಷಿಗಳ ॥ ೨೫

ಪಾಲ್ಗಡಲ ಮಗಳಿನಿಯನೊಡನೆ ಬೊಮ್ಮಂ ಸರಿಮಿ ।
ಗಿಲ್ಗೆ ಕಿನಿಸಿಂ ಪೋರೆ ಮಿಱುಪ ಮಿಂಚುಗಳ ಬಂ ।
ಬಲ್ಗಳಗ್ಗಳ ಮೀಂಗಳಮರ್ದು*ಗೈಯುವರನೇಸಱ ಪಲವ ಜಗಜಗಿಸುವ ॥
ಬಲ್ಗಿಚ್ಚುಪಱುವ ಲಿಂಗಂ ಮೂಡೆ ಕಣ್ಗೆಟ್ಟು ।
ಕಾಲ್ಗಾಣದಾದನಾಕಾಳ್ಗಿಯ್ಯುತ್ತಕಳ್ಬುತೆ ತು ।
ಟಿಲ್ಗಂದಿ ನಾಲ್ಮೊಗಂ ತಲೆಗಂಡನೇ ಶಿವನ ಬಲ್ಗಣೆಯ ಪೋಲ್ಗಾವನು ॥ ೨೬

ಎಲೆ ಚೋಳ ಪಂಚವಿಂಶತಿಲೀಲೆಗಳ ಕತೆಯ ।
ನೊಲಿದು ಕೇಳ್ದವರಷ್ಟಮದಗಳಂ ಕಿಡೆಮೆಟ್ಟಿ ।
ಯಲೆದು ಸಪ್ತವ್ಯಸನದೇಟಿಗ್ಗಿಯುಂ ವೈರಿಷಡ್ವರ್ಗಮಂ ಕಿತ್ತು ಬಿಸುಟು ॥
ಬಲದೊಳಂತಃಕರಣಚಾತುಷ್ಟಯಂಗಳ ।
ಗ್ಗಲಿಕೆಯುಂ ತೀರ್ಚಿ ಪಡೆವರು ಭೋಗಮೋಕ್ಷಂಗ ।
ಳಲಘುಪದವಿಯನೆಂದು ಪೇಳ್ದನಾಚಿದ್ಘನಶಿವಾಚಾರ್ಯನಘತಿಮಿರಸೂರ್ಯಂ ॥ ೨೭

ಎಂತೆನ್ನ ಪರಮಾರ್ಥದಾರಿದ್ರ್ಯಕೆಂದು ಚಿ ।
ತ್ಯಾಂತಗುರುವಂ ಕೇಳಲಾಶಿವಾಗಮಲಿಖಿತ ।
ಹಂತಿಯೆನಿಸುವ ಸಾಧನಗಳಿಂದ ನೆಲೆಯಱಿದು ಕಾರಿಕಾಲಮ್ಮೆಕಾಲು ॥
ಮುಂತಾಗಿ ನಡೆಯೆ ಸುಜ್ಞಾನಾಂಜನವನಿಕ್ಕಿ ।
ಶಾಂತಮುರುಘರೆ ಮಂತ್ರವಾದಿಯಾಗುತ್ತಿರೆ ಪು ।
ರಂತರೆಂತಧಿಕಪರವಸ್ತುವಂ ಕಂಡವರಡಿವಿಡಿದು ಬದುರ್*ಕೆಂದನು ॥ ೨೮

ಇಂತು ಚಿದ್ಘನಶಿವಾಚಾರ್ಯರಾಚೋಳಭೂ ।
ಕಾಂತಂಗೆ ಬೋಧಿಸುತ್ತಿರ್ಪೆಡೆಯೊಳಾನೃಪನ ।
ಕಾಂತೆ ಸದ್ಗುಣಿಯಮೃತವತಿ ನೋಡಿ ಕೆಳದಿಯೊರ್ವಳೊಳೆಂದಳಾನಂದಿಸಿ ॥
ಚಿಂತಾಮಣಿಯ ಜಱಿವ ಪಂಚಕಲ್ಪದ್ರುಮದ ।
ಸಂತತಿಯನತಿಗಳೆವ ಕರದಾನಿ ಗುರುಮೂರ್ತಿ ।
ಮುಂತೆ ರಾಜಿಸುತಿರ್ಪರಿವರ ಕೃಪೆಯಿಂ ಪಡೆವೆನೆನ್ನಭಿಮತವನೆಂತೆನೆ ॥ ೨೯

ಹಿಂದೆಮ್ಮ ಮಂತ್ರಿ ಪತಿಮೋಹಿಯಣುಗನನೆನ್ನ ।
ಕಂದನೆಂದೇ ಬಗೆದು ಸಲಹುತಿರ್ದಪ್ಪೆನಾ ।
ನಂದು ರೇವಣದೇಶಿಕೇಂದ್ರಪದಯುಗವ ತೆಲ್ಲಿಗ ಕಲ್ಲಿಸೆಟ್ಟಿ ನೆನೆದು ॥
ಒಂದು ಮುನ್ನುಳ್ಳಕ್ಕಿಗೆಣೆಗಣ್ಣನುಳ್ಳಾತ ।
ನೆಂದೆಂಬಿನಂ ಮೆಱೆದನಂತೆ ಮದ್ಗುರುಕೃಪೆಯೊ ।
ಳಿಂದು ಸುತನೊರ್ವನಂ ಮದ್ಗರ್ಭಶರಧಿಯೊಳು ಪಡೆವೆನಾನೆಂತೆಂದೊಡೆ ॥ ೩೦

ಚೆಲ್ಲಿಗಂಗಳ ಮಿನುಗುವರಳೆಲೆಯ ಮಾಂಗಾಯ್ಗ ।
ಳುಲ್ಲಾಸದಿಂ ಮಿಱುಗುವೆಳನಗೆಯ ಮೊಳೆವಲ್ಲ ।
ಗಲ್ಲದೆಡೆಯೊಳಗೊಸರ್ವ* ಲಾಲಾಜಲಾಮೃತದೊಳಬ್ಬೆಂಬ ಸುತನ ತೊದಲ ॥

ಸೊಲ್ಲನಾಲಿಸಿ ನೋಡಿ ತೆಗೆದು ಮೂರ್ಧ್ನಿಘ್ರಾಣ।
ದಲ್ಲಿ ತಳ್ಳೈಸಿ ಬಾಯೊಳು ಬಾಯನಿಟ್ಟಟ್ಟಿ।
ಅಲ್ಲಿ ಮಂಡಾಡುವೆಂ ಪಾಡುವೆಂ ಮುದ್ದುಗಳ ಬೇಡುವೆನೆನುತ್ತೆ ನಲಿದು ॥ ೩೧

ಸೋಗೆಗಂಗಳ ವನಿತೆ ಮನದೊಳಗೆ ನರ್ತಿಸು।
ತ್ತಾಗಳೈತಂದು ಗುರುಪದಕೆ ವಂದಿಸಿ ನಿಂದು।
ಕೈಗಳಂ ಮುಗಿದು ಬಿನ್ನಪ ಜೀಯ ಚೋಳಕುಲಕಮಲಬಾಲಾರ್ಕನೆನಿಪ ॥
ಚಾಗಿ ಕುವರನನಿತ್ತು ರಕ್ಷಿಸೆನೆ ದೇಶಿಕಂ।
ರಾಗಿಸುತ್ತುಂ ಮಗಳೆ ಕೊಳ್ಳೆನುತ ಕರ್ಪೂರ।
ಯೋಗತಾಂಬೂಲದೊಡನಿಷ್ಟಸಿದ್ಧಿಯನಿತ್ತನಾರ್ಯನಾನಂದದಿಂದ ॥ ೩೨

ಧಾರಿಣೀಶನ ಹೃದಯಕಮಲವನಲರ್ಚಿ ಗಂ।
ಭೀರ ಶಿವಭಕ್ತಚಕ್ರಂಕಳ್ಗೆ ನಲವಿತ್ತು।
ಸಾರಿದವರಜ್ಞಾನತಿಮಿರವಂ ತೀರ್ಚಿ ನೃಪನಂಗನೆಯ ಹರ್ಷವೆಂಬ ॥
ಚಾರುನಯನಕ್ಕೆ ಬೆಳಗಂ ಬೀಱಿ ಸರ್ವಸ।
ತ್ಕಾರವಂ ಕೈಕೊಂಡು ಗಣಸಂತತಿಯ ಸಿರಿಯೊ।
ಳಾರಾಧ್ಯಮೂರ್ತಿ ಬಿಜಯಂಗೈದನವಮಲಪ್ರಭಾಕರಂ ನಿಜನಾಸಕೆ ॥ ೩೩

ಇತ್ತಲೀಚೋಳಧರಣಿಪನೀಶಪೂಜೆಗೈ।
ಯುತ್ತೆ ಶಿವಶರಣಗೋಷ್ಠಿಯ ಸುಖದೊಳಾೞಿ ಮುೞು।
ಗುತ್ತೆ ಮಾರ್ಕಂಡೇಯಮುಖ್ಯಪೌರಾಣದೊಳಗೋಲಾಡುತಾನಂದದಿಂ ॥
ಸತ್ಯಸದ್ಗುಣಶಾಂತಿವೀರವಿತರಣಗಳಿಂ।
ತತ್ತರುಣಿಸಹಿತ ಚರಸೇವೆಗೈಯುತ್ತಲೈ।
ವತ್ತಾಱುದೇಶದರಸರು ತನ್ನಸೋಲ್ಪೈಸೆ ರಾಜ್ಯವಾಳುತ್ತಿರ್ದನು ॥ ೩೪

ಅರಿರಾಯಗಿರಿವಜ್ರದಂಡನಘವನಕಾಲ।
ಸರಣಿ ನಿರ್ಮಲಧರ್ಮ ಸುಜ್ಞಾನಸನ್ಮಾನ।
ನಿರುತಿಯಜ್ಞಾನಪಾಶಚ್ಛೇದಪಾವನಂ ರಾಜರಾಜಂ ಮದೀಶಂ ॥
ಧರಣಿಯಧಿನಾಥನಹ ಸತ್ಯೇಂದ್ರಚೋಳವರ।
ನರಪತಿಯನಂತಗುಣಿಯೆಂದು ದಶದಿಕ್ಕಿನೊಳು।
ಪರಿದಾಡಿದಳು ಕೀರ್ತಿಮಾನಿನಿ ವಿಲಾಸದಿಂ ಶಿವನ ಭುಜಬಲದಂದದೆ ॥ ೩೫

ಅಂಬುಧಿಪರೀತವಸುಮತಿಯನಾಳುವ ನೃಪಕ।
ದಂಬಕೋಟೀರಮಂಡಿತಪದಂ ದಿಗ್ಭೂಮಿ।
ಯಂಬರವ ಚುಂಬಿಸುವ ಕೀರ್ತಿ ಬಾಲಾರುಣಾನ್ವಯಸಮುದ್ಧರಣಸುತನು॥
ಬಿಂಬಾಧರಿಯು ಗರ್ಭದಿಂದೊಗೆವನೆಂಬುದ ನಿ।
ತಂಬಿನಿಯು ಚೆಲ್ವಿನಂಬರದಲ್ಲಿ ಕಾಣಲಾ।
ಯ್ತೆಂಬಂತೆ ಮಾಣಿಕಂಗಂಡಳಂತಾನೃಪನ ರಾಣಿ ಗುರುಮಂತ್ರವಾಣಿ॥ ೩೬

ಹಿಂಡದಿರು ಹಿಱಿಯದಿರು ಹಿಕ್ಕಿ ಕೂಡೊದಱದಿರು।
ಪುಂಡರೀಕೇಕ್ಷಣೇ ನಾನಳುಕಿ ನಿನ್ನ ಮಱಿ।
ಗೊಂಡು ಪಾದಾಬ್ಜಮಂ ನೆಱಿ ಸಾರ್ದು ಬಾಟ್ವೆನೆಂದಿರ್ದನೆಲೆ ತಾಯೆ ಕೂರ್ತು॥
ಮಂಡೆಯೊಳ್ ಕೈಯಿಡಲ್ ನಂಬಿರ್ದನಕಟ ! ಮುಂ।
ಕೊಂಡು ಮುಡಿಮಾಡಿ ಪೆಡೆಗಟ್ಟುವಾ ಕೇಳ್ ನಿನ್ನ।
ಗಂಡಂಗೆ ಲೇಸೆ ಪೇಟಿಸಿಂಬಳಕದಿಂ ಮಿಂದು ರಾಜಿಸಿದಳಾಮಾನಿನಿ॥ ೩೭

ಇಂತು ಚಾತುರ್ಥಿಕಸ್ನಾನಮಂ ಮಾಡಿ ನೃಪ।
ಕಾಂತೆ ದೇವಾಂಗಮಂ ತೆಗೆದುಟ್ಟು ಸತ್ಕೃಪಾ।
ವಂತನಂ ಪಡೆವಟ್ಟುಱಿಂ ಬಟ್ಟಮುತ್ತಿನೊಡಿಗೆಯ ತೊಟ್ಟು ಸುಲಿಪಲ್ಗಳ॥
ಕಾಂತಿ ಮುಖದೊಳ್ ಪೊಳೆಯೆ ಶುಭ್ರತ್ರಿಪುಂಡ್ರದಿಂ।
ದಂ ತಳ್ತ ಚೆಲ್ವ ಪಣೆಯಿಂ ಮುಡಿದ ಮಲ್ಲಿಗೆಗ।
ಳಿಂ ತರಳೆ ಮೂಱುಲೋಕಕ್ಕಮುದು*ಗಱಿವ ಚಂದಿರಮೊಗದಿನೊಪ್ಪಿರ್ದಳು॥ ೩೮

ತಿಲಕುಸುಮದಾಯ ಸಂಪಗೆಯೆಂಬ ನಿಂದೆಗಳ।
ಮಲಹರನ ಭಕ್ತಿಯ ಮುಖಾಬ್ಜಮಂ ಸಾರ್ದು ತಾಂ।
ಕಳೆಯೆ ನಾಸಿಕ ಚಂದ್ರಸೂರ್ಯರೆಡಬಲದೊಳೋಲೈಸಲಾಚಾರಲಿಂಗ॥
ನಿಳಯಮಾಯಿತ್ತಲ್ಲಿ ಪರವಸ್ತುವಂ ಕುಱಿತೆನ್ನ।
ತಲೆಯಡಿಯೊಳೆಸಗುವೆಂ ತಪವನೆನುತುಂ ಮುಕ್ತಿ।
ನೆಲೆಗೊಂಡವೋಲಮೃತವತಿಯ ಮೂಗುತಿಯ ಪೆರ್ಮುತ್ತು ರಾರಾಜಿಸಿದುದು॥ ೩೯

ಶ್ರುತಿಗಳಭವನನಱಸಿ ಬಟಲಿ ಶಿವಮಯಮಪ್ಪ।
ಸತಿಯ ನಯನಂಗಳಂ ಸಾರ್ದವೈ ಸರಿಯಿಲ್ಲ।
ಧೃತಿಶಯದ ಲಾವಣ್ಯರಸವ ನೆಱಿ ಕಣ್ಣಿಟ್ಟು ಕರಗಿ ಕಿವಿಗೋವಿಯಲ್ಲಿ॥

ಚತುರಾಸ್ಯನೆನಿಪಕ್ಕಸಾಲೆಯಿರೆದಪನೆಂಬ ।
ಮತಿ ಬೇಡವೆನಲೆಸೆದುವಾಕರ್ಣನಯನಗಳು ।
ಪತಿಭಕ್ತಿಗಾವಗಂ ಕಂಡು ಕೇಳ್ದರ ಸಂಗಮುಗಲದಂತಜಿುಪುವಂತೆ ॥ ೪೦

ಗುರುತರದ ಕುಚದಿಂದ ಚಂಪಕದ ಕುಸುಮಬಂ ।
ಧುರಲಘುಶ್ವಾಸನಾಸಿಕದಿಂ ಚಕೋರದೊ ।
ಳ್ಪರಿಜಿನಕ್ಷಿಗಳಿಂದಲಾಪಾದಮುಸ್ತಕಾಭರಣಂಗಳಂದದಿಂದ ॥
ಸ್ಮರನೆಂಬ ಬಾಲಕಗೆ ಛಂದೋವಿಭೇದಮಂ ।
ಪರಮುಕವಿಹೃದಯದಜಿುಕೆಯನಲಂಕಾರದಲಿ ।
ಪರಿಣತೆಯ ತಿಳಿಪುವಾಚಾರ್ಯಳೆನೆ ರಾಜಿಸಿದಳಾರಾಣಿ ಕಮಲಪಾಣಿ ॥ ೪೧

ಪೊಡೆಯೊಳಗೆ ಪುಗಿಸದಿಂದೆನ್ನ ಪೊಜಿಮುಡಿಸಲಾ ।
ಹಿಡಿತಕ್ಕೆ ಬಂದು ದಾರಿದ್ರ್ಯದಿಂದಂ ನವೆದ ।
ನಡುವನಾಶ್ರೈಸಿದೆಂ ನಾಭಿಮಂಡಲದಿಂ ಪಯೋಧರದ ಸೀಮೆಗಾಗಿ ॥
ನಡೆವೆನೆಂದೈತರ್ಪ ಬಾಸೆಯಂ ತಮ್ಮ ನೆಲೆ ।
ಯೆಡೆಗೆ ಕರೆದೈತರಲ್ ಮೋಹದಿಂದಂ ತಡೆಯು ।
ಲೊಡಬಟ್ಟ ಮೊಲೆಗಳಿಂದೆಸೆದಳಾನಾರಿ ಕಂದರ್ಪರಾಜ್ಯದ ವಿಚಾರಿ ॥ ೪೨

ನಳಿತೋಳ ಮೊದಲೆಂಬ ಬಾಹುಯುಗವೆಂಬ ನುಡಿ ।
ಗಳ ನಿಂದೆಯಂ ಪೊರ್ದದಧಿಕಚಂಪಕಮಾಲೆ ।
ಗಳ ಪಾಂಗಿನಿಂದಿರ್ಪ ದೋರ್ಲತಾಯುಗಳದಿಂದಮಮ ! ಮನ್ಮಥವೀರನ ॥
ನಿಳಯದಗ್ಗದ ಗಂಧಸಿಂಧುರವ ಪೋಲ್ವ ಕೋ ।
ಮಳೆಯೆಂಬುದಂ ಕುಚದ ನಡುವೆಸೆವ ಬೈತಲೆಗ ।
ಳೊಳೆ ಕಾಣಲಾದುದೆಂಬಂತೆಸೆದಳಾಚೆಲ್ವ ನಾರಿ ಸದ್ಗುಣವಿಚಾರಿ ॥ ೪೩

ಎರಳೆಗಣ್ಣಳ ವಟಫಲಾಧರದ ಬೆಳ್ನಗೆಯು ।
ಪರಪುತ್ತುವಿರ್ಪ ಪ್ರಕಾಶರದದೆಸೆವ ಚಂ ।
ದಿರಮೊಗಕ್ಕೆಳಸುತಾನಾಭಿವಲ್ಮೀಕದಿಂ ಬಾಸೆಯೆಂಬಸಿತಸರ್ಪಂ ॥
ಬರೆ ರಾಜನಾಳು ಸಾಲಿಟ್ಟು ಬಟ್ಟೆಯ ಕಟ್ಟ ।
ಲುರುಫಣೆಯ ಪೆಡೆವರಲ್ ಕುಚದ ಮಧ್ಯದೊಳಿರ್ಪ ।
ಷರಿಯ ಮಣಿಮಯಮಧ್ಯದಮಲನಕ್ಷತ್ರಮಾಲಿಕೆ ಮೆಜಿುದುದಾವನಿತೆಗೆ ॥ ೪೪

ಕುಮುದದಿಂ ಪ್ರತಿಕೂಲದಿಂ ವಿಜಾತಿಗಳ ಸಂ।
ಗಮದಿಂದ ಜಡಜೀವನೋಪಾಯದಿಂ ಭಂಗ।
ಸಮಿತಿಯಿಂದಿರ್ಪ ತಾವರೆಗೊಳಂ ಪತಿಯ ಹರ್ಷಾನುಕೂಲೆಯ ಸತ್ಕುಲ॥
ರಮೆಯನುತ್ತಮಶಿವಪ್ರಾಣಿಯನಭಂಗದು।
ತ್ತಮಪೂರ್ಣಚಂದ್ರವದನೆಯ ನಾಭಿಸರಸಿಯೊಂ।
ದಮಲತ್ವಕೆಣೆಯಲ್ಲವೆಂದೆಸೆದಳಾಚೆಲ್ವ ಪೆಣ್ಣು ಭೂಭುಜನ ಕಣ್ಣು॥　　೪೫

ಕನ್ನೈದಿಲಲರ್ಗೆ*ಯಾರಡಿಗೆ ಶಶಿಬಿಂಬಕ್ಕೆ।
ರನ್ನಕ್ಕೆ ಪೊನ್ನ ಕಳಸಕ್ಕೆ ತಿಳಿಗೊಳಕೆ ಮಿಗೆ।
ಚೆನ್ನೆಸೆವ ಬಗಸೆಗಣ್ಣಳಕಮಾನನಮಧರಕುಚಯುಗ್ಮಮೆಸೆವ ನಾಭಿ॥
ಮುನ್ನಮೇ ಸರಿಯೆಂಬ ಬಲ್ಮೆ ಪೊಱಿನಾಱಿಧಿಕ।
ವೆನ್ನಲುಚಿತಂ ತಥ್ಯವೆನಲೆಸೆದಳಾಚೆಲ್ವ।
ಕನ್ನೆ ಭೂಭುಜನ ಮನದನ್ನೆ ರತಿಕಲೆಯೊಳುತ್ಪನ್ನೆ ಸದ್ಗುಣಕಭಿನ್ನೆ॥　　೪೬

ಪೊಡೆಯರಲನಂಗನೆಯ ಮನೆಯ ಸತಿಯೆನಲಾಳ್ವ।
ನುಡಿದೂಸಱಿಂಗಳ್ಳದಾ ರಮಾಕಾಂತೆಯೊಡ।
ನೆಡೆವಿಡದೆ ಪಗಲೆ ಪಟ್ಟಿಯೊಳಿರ್ಪನದು ದೋಷವೆಂದು ಮನದೊಳ್ ನೆನೆಯದೆ॥
ಎಡೆವಿಡದೆ ಸೂರ್ಯನಾರಾಯಣನೆನಿಸಿಕೊಂಬ।
ಕಡೆಗಿವನ ಬರ್ದು*ಕು ನೀರೊಳ್ ನೆರೆಯದಿರದೆಂದು।
ಪೊಡವಿಯಾಡುವ ಮಾತಿಗೆಡೆಯಾಗಿ ರವಿ ಪಡುವ ಕಡಲೊಳಾಹಾ! ಬಿಟ್ಟನು॥ ೪೭

ಲೋಕದ ಜನಂಗಳಿನ್ನುಂ ಮಗನ ಹೆಱಿಯೆಂಬ।
ರೇಕಿಲ್ಲಿಯಾನಲ್ಲಿಗೆಯ್ದುಮರ್ದೆಪ್ಪಿಯಾ।
ಲೋಕಿಸುತೆ ನೆರೆದ ಕಂದನನೊಲ್ದು ಮುಂಡಾಡಿ ಬೆಳಗನ್ನವಿರ್ಪೆನೆಂದು॥
ಜೋಕೆಯಿಂ ಪಾಲ್ಗಡಲ್ ನಡೆತಂದು ತಾರಕಾ।
ನೀಕವೆಂದೆಂಬ ಮುತ್ತಂ ಕೊಟ್ಟುದೋ ಎನಲು।
ರಾಕೇಂದುವಂ ಬಳಸಿ ನಕ್ಷತ್ರದೇಟಿಗ್ಗಿಯಿಂ ಬೆಳ್ದಿಂಗಳೆಸೆದಿರ್ದುದು॥　　೪೮

ಆ ರಾತ್ರಿಯಲ್ಲಿ ಪೇರೋಲಗವ ಬೀಟಿಟ್ಟುಟ್ಟು।
ಭೂರಮಣನೈತಂದು ಲಿಂಗಾರ್ಚನೆಯನೆಸಗಿ।
ಚಾರುಶಿವಲಿಂಗಪ್ರಸಾಧಮುಂ ಸವಿಯುಲುಟೀಧುದ ಕೊಂಡು ಭಕ್ತಿಯಿಂದ॥

ನಾರಿ ಶಯ್ಯಾಗೃಹದ ಹಂಸತೂಳದ ತಲ್ಪ ।
ದೋರಣದ ಚೆಲ್ವಿನಡಕಿಲ್ವಾಸಿನೊಳ್ ಪತಿಯು ।
ಸಾರಿ ಕರ್ಪೂರತಾಂಬೂಲಸೇವೆಯೊಳು ಮನ್ಮಥಯುದ್ಧಕನುವಾದಳು ॥ ೪೯

ಎನಗೆ ಸಾಕೇ ತಾರಹಾರೆ ನಿನ್ನಧರದೊಳ ।
ಗನಿದೆನುತ್ತಡಿಗಡಿಗೆ ಪೀರ್ದು ಕೇಕಾಶಿರೋ ।
ಜನಿತಧಮ್ಮಿಲ್ಲೆ ಕೇಳೌ ನಿನ್ನನಗಲಿ ಪತ್ತಱ ಕಡೆಯುವಸ್ಥೆಯಲ್ತೆ ॥
ಘನಕುಚಶ್ರೀಪರ್ವತಾಗ್ರಗಳ ಕಂಡೆರ್ದೆ*ಯೊ ।
ಳನುಗೊಳಿಸಿದೆಂ ಧರೆಯೊಳುಳ್ಳ ದಿವ್ಯಕ್ಷೇತ್ರ ।
ವೆನಿತವಱ ಮುಕ್ತಿಗಳ್ ನಿನ್ನೊಳೊಳವೆಂದು ರವಿಸುತ್ತಿರ್ದನಾಚೋಳನು ॥ ೫೦

ಎಸೆವಂಗಪರಿಮಳಂಗಳ ನಾಸಿಕದಿನೀಂಟಿ ।
ಮಿಸುಗುವಧರಂಗಳಂ ಪೀರ್ದು ಕಣ್ಗಳೊಳೆ ನಿ ।
ಟ್ಟಿಸುತಲಮರ್ದ*ಪ್ಪುತನ್ಯೋನ್ಯಕರ್ಣಂಗಳೊಳು ಲಲ್ಲೆನುಡಿಯಿನಿದುಗೇಳಿ ॥
ಒಸೆದು ನೆರೆದುರುಸದಾಚಾರದಿಂ ಗುರುವಿಗ ।
ರ್ಪಿಸುತ ಶಿವಲಿಂಗಜಂಗಮುಸುಪ್ರಸಾದಂಗ ।
ಳಸುಗಳೆರಡೊಂದಾಗಲಾಮಹಾಲಿಂಗಭೋಗಿಗಳು ಸುರತವ್ವನೆಸಗಲು ॥ ೫೧

ಲೋಕಕ್ಕೆ ನಾಂ ಮಿತ್ರನೈಸಲೇ ಶಿವಗಣಾ ।
ನೀಕಕ್ಕೆ ಮಿತ್ರನುದಯಿಸನಿಲ್ಲಿ ನೋಟಪ್ಪೆನಾ ।
ನೀಕೆಯು ಪವಿತ್ರಕುಕ್ಷಿಯನೆಂದು ಪೂರ್ವಗೋತ್ರದೊಳುದಯುವಾಗೆ ಮಿತ್ರಂ ॥
ಆಕಾಲದೊಳಗಮೃತವತಿ ಶಿವನ ಪೂಜೆಯಂ ।
ಭೂಕಾಂತನೊಡನೆ ವಿರಚಿಸಿ ಸುಖದೊಳಿರೆ ಗುರುಕೃ ।
ಪಾಕಲ್ಪವೃಕ್ಷದುತ್ಪತ್ತಿಬೀಜದ ಮಾಟಕ್ಕಿಯಿಂದ ಗರ್ಭಂ ತೋಱಿತು ॥ ೫೨

ವಿಳಸದೋಂಕಾರಬೀಜಂ ಕಂದವಾಗೆ ಪೊಡೆ ।
ಯೊಳೆ ಮೆಲ್ಲನಂಕುರಿಸೆ ನಾಭಿಮಂಡಲದಲ್ಲಿ ।
ಸುೞಿದೋಱಲೆರ್ದೆ*ಯ ಸೆರೆ ಪಸುರ್ವ*ಳ್ಳಿಯಾಗೆ ಮತ್ತಧರದೊಳು ತಳಿರುದೋಱೆ ॥
ನಳನಳಿಪ ಕುಚಕುಟ್ಮಲಂ ಮೆಱೆಯೆ ನಾಡೆ ಕ ।
ಣ್ಗಳುಮಲರೆ ರಾಜಿಸಿದಳಾಕಾಂತೆ ಚೋಳಭೂ ।
ವಳಯಾಧಿಪತಿಗಿಷ್ಟಫಲವೀವ ಕಲ್ಪಲತೆಯಂತೆ ಕಣ್ಗೆನದ ಬೀಱ ॥ ೫೩

ನಲಿದು ಗುರುಕರುಣದಿಂ ಕೈಲಾಸಪುರದ ಬಾ।
ಗಿಲ ತೋರ್ಪ ಕಂದನಂ ಪಡೆವೆನೆಂಬಾಬಾಸೆ।
ಬಲವೇಱಿತೆಂಬಂತೆ ಬಾಸೆ ನಳನಳಿಸಿತ್ತು ಬಹಳ ಬಡತನದೊಳಿರ್ಪ ॥
ಲಲನೆಗೀನಡು ಬಡತನಂಬೋಗಿ ಬಿಣ್ಪಾಯ್ತು।
ನೆಲವೆಣ್ಣ ತದ್ಧೃತಿಯ ಬೇಡಿಯಡಿಗಡಿಗೆ ಪದ।
ಜಲಜಗಳನಮುರ್ದ*ಪ್ಪೆ ವಹಿಲಮುಂ ಮಾಣ್ದಂತೆ ಚೆಲ್ವ ನಡೆ ಮಂದನಾಯ್ತು ॥ ೫೪

ಶಿವಲಿಂಗಮುಂ ಕರಸ್ಥಲದಲ್ಲಿ ಕಾಣ್ಬೊಡೀ।
ಯುವತಿಯಕ್ಷಿಗಳಿಗೆಡೆವೊಕ್ಕೈವಂತಲ್ಲದಿವ।
ಳವಯಕೆ ಪೊರೆಯಾದೆವದುವಲ್ಲದೀಸತಿಯನೆರ್ದೆ*ಗಿಡಿಸಿ ಕೊಂಡಿರ್ದವು ॥
ಭವನ ಕರುಣದ ಪಿಂಡಮೀಗರ್ಭಮುಂ ಪೊಕ್ಕು।
ದೆವಗಾದುದಪರಾಧಮೆಂದಳ್ಕಿ ಕುಚದ ತೊ।
ಟ್ಟವು ಮೊಗಂ ಕಂದಿದುವೊ ಪೆಱದಲೆಯನಂ ನೆನೆಯುತಮೃತಮಾರ್ಗಂದಳೆದುವೋ॥

ಉದಯಿಸುವ ಪುತ್ರನಿನಕುಲಚಕ್ರವರ್ತಿಯೆಂ।
ಬುದನಱಿಪುವಂತರಲ್ದುದು ನಾಭಿಸರಸಿಜಂ।
ಸದಮಲಾಚಾರಿಯುತ್ಪತ್ತಿಯಾದಪನೆಂಬ ಮಾತ್ರದೊಳೆ ಭವಪಾಶದ ॥
ಪುದಿದ ಬಲ್ಕಟ್ಟು ಸಡಿಲುವ ತೆಱದಿ ಸಡಿಲಲಂ।
ಗದ ಬಿಗುಪು ಗರ್ಭಿಣಿಗೆ ನವಮಾಸಪೂರ್ಣಮಾ।
ದುದು ತದ್ವಿಲಾಸಿನಿಯ ಸಂತಸದ ಮುಂದೆ ನಸುಬೇನೆಯುಂ ಪೇೞಲಹುದೇ ॥ ೫೬

ಮಿಗೆ ಶಾರದಾಭ್ರದಿಂ ಚಂದ್ರಮುಂ ರೋಹಣದ।
ನಗದಿಂದ ಚೆಲ್ವ ರನ್ನಂ ಕಾಮಧೇನುವಿಂ।
ಸೊಗಯಿಸುವ ಪಾಲ್ ಮಿಱುಪ ತಾಮ್ರಪರ್ಣಿಯ ಸಿಂಪಿನಿಂ ಮುತ್ತುಪೂರ್ವಾದ್ರಿಯಿಂ॥
ಝುಗಝುಗಿಪ ಬಾಲಾರ್ಕನುದಯಿಸದನೆಂದೆಂಬ।
ಬಗೆ ಬೇಡ ಸತ್ಪ್ರಣವದಿಂ ಮೂಲಮಂತ್ರ ತಾ।
ನೊಗೆದಂದದಿಂದುದಯನಾದನಾವನಿತೆಯುದರದಿನಮಳಸುಕುಮಾರನು ॥ ೫೭

ಈ ಪುತ್ರನಧಿಕಬಲನಿವನಾತ್ಮದೊಳ್ ಪುದಿದ।
ಪಾಪಮಂ ಕಳೆವ ದುಷ್ಕೃತ್ಯಭೋಗಂಗಳಂ।
ಕೈಪೆಂದೆ ಕಾಣ್ಬನೆನೆ ಮೆಱೆವ ಹಲಮುಸಲಪಿಚುಮಂದಪತ್ರಂಗಳಿಂದ ॥

ವ್ಯಾಪಿಸುವ ಪೊಱಮಡುವ ಸತಿಯರ ನಿಧಾನದಾ ।
ಲಾಪದಿಂ ರಂಜಿಸುವ ಸೂತಿಕಾಗೇಹದೊಳು ।
ಭೂಪನ ಕುಮಾರನೆಸೆದಂ ರತ್ನಮಯಕನಕಪರಿಯಣದ ಮಧ್ಯದಲ್ಲಿ ॥ ೫೮

ಸಲ್ವ ಸಗ್ಗಂ ನೆಲಕೆ ಕಾಲ್ವಟ್ಟಿಯಾಗಿ ಬಂ ।
ಬಲ್ವಿಡಿದು ನಡೆತರ್ಪ ಬಲ್ಪಡೆಗಳ ಮರಿಯರ ।
ನಾಲ್ವಡಿಸಿದಂದದಿಂಗೋಲ್ವಿಲ್ಲ ಸೈಪನುರೆ ಪೋಲ್ವ ಪುರ್ಬುಗಳ ರತಿಯ ॥
ಗೆಲ್ವ ಸೊಬಗಿಂದುರೆ ಕುಕಿಲ್ವಟ್ಟಿಱಂದೈದೆ ।
ಜೋಲ್ವ ಮುಡಿಯಬಲೆಯರೆಟಲ್ವ ಮನದಮಳಿನ ಮ ।
ರಲ್ವ ಕಣ್ಣಿಂ ನೋಡೆ ಚೆಲ್ವ ಕುವರನ ಸೊಬಗು ಸಾಲ್ವುದೇ ಭೂತಳದೊಳು ॥ ೫೯

ಇದು ಸಕಲಭಕ್ತಪದಪಂಕೇಜರೇಣುಮ ।
ಸ್ತದ ಮಲ್ಲಣಾರ್ಯನಾಚೇರಮಾಂಕಂಗೆ ಬೆಸ ।
ಸಿದ ಭಕ್ತಸತ್ಯೇಂದ್ರಚೋಳಕೃತಿ ಭಾವಚಿಂತಾರತ್ನವಮಳಕರ್ಣ ॥
ಹೃದಯ ಮಸ್ತಕ ವದನ ಸರ್ವಾಂಗ ಸೌಖ್ಯಕಾ ।
ಸ್ಪದಮಖಿಳ ಸಜ್ಜನರ್ಗೆ* ಪಂಚಾಕ್ಷರಿಯ ಮಹ ।
ತ್ವದ ಬೋಧೆಯೆಂದೋದಿದೊಡೆ ಕೇಳಿದರಿಗಿಷ್ಟಸಿದ್ಧಿ ಸರ್ವರಿಗಪ್ಪುದು ॥ ೬೦

ಮೂಱನೆಯ ಸಂಧಿ ಸಮಾಪ್ತಂ

---

## ನಾಲ್ಕನೆಯ ಸಂಧಿ

ಪಲ್ಲವಿ ॥ ಒಗೆದುಮಾಧವನ ಕರುಣದ ಮಂತ್ರಲಕ್ಷ್ಮಕಂ ।
ಸೊಗಸುವಗ್ರಜನೊಡನೆ ಬಾಲಲೀಲೆಯ ಕಳೆಯೆ ।
ಮಿಗೆ ವಸಂತಂ ಬರಲ್ ವನಕೇಳಿಯಲ್ಲಿ ಮೆಱಿದಂ ಚೋಳಚಕ್ರೇಶನು॥

ಶ್ರೀಗುರುವೆ ತ್ರಿಜಗೈಕಗುರುವೆ ಮದ್ಗುರುವೆ ಸಕ ।
ಲಾಗಮಪುರಾಣಶ್ರುತಿತತಿಯಱಿಸಿ ಕಾಣದ ಮ ।
ಹಾಗುರುವೆ ನಿತ್ಯನಿರ್ಮಲಗುರುವೆ ಪರಮಸಮ್ಯಜ್ಞಾನಭರಿತಗುರುವೆ ॥

ಆಗುಹೋಗೆಂಬುವಿಲ್ಲದ ಗುರುವೆ ನಿಖಿಲಚರ ।
ಣಾಗತರ ಪೊರೆವ ಘನಗುರುವೆ ನೀನೆನ್ನ ಹೃದ ।
ಯಾಗತದೊಳೊಲವಿಂದ ನೆಲಸಿ ಸಲಹುಗೆ ನಮೋ ದಕ್ಷಿಣಾಮೂರ್ತಿಗುರುವೆ ॥ ೧

ಗಿರಿಜೆಯ ಮೊಗಂ ನೀಲಕುಟ್ಟಿಮದೊಳಂ ಪೊಳೆಯೆ ।
ಸರಸಿಯೊಳ್ ಮೆಱೆವ ತಾವರೆಯೆಂದು ಕೈನೀಡೆ ।
ಶಿರವೆತ್ತಿ ಸಿಂಹಾಸ್ಯಗಣವರನ ಕಂಡೋಡಿವರ್ಪ ತಮ್ಮನ ನವಿಲಿಗೆ ॥
ಉರಗನಳ್ಕುತೆ ಪರಿಯೆ ಕಟ್ಟಬಿದು ಪೊಡೆಯೊಡೆದು ।
ಸುರಿಯಲುಂಡಲಿಗೆ ಬಂದಪ್ಪಿ ಹೊಟ್ಟೆಯ ಕಟ್ಟಿ ।
ಕರಿಮುಖನ ಮುದ್ದು ಬೇಡಲ್ಕೆ ಸುಂಡಲ ನೀಡೆ ನಗುವ ಶಿವ ರಕ್ಷಿಸೆಮ್ಮ ॥ ೨

ಆವೇಳೆಯಲ್ಲಿ ಕೆಳದಿಯರೈದಿ ಪೇರೊಸಗೆ ।
ದೇವ ಬಿನ್ನಪವಯ್ಯ ಕುವರನುದಯಿಸಿದನೆನೆ ।
ಭೂವರನ ಚಿತ್ತಭೂಮಿಯೊಳೆ ಹರ್ಷದ ಬೀಜಮಂ ಬಿತ್ತಿ ಸರ್ವಾಂಗವ ॥
ತೀವಿದಗೆಯನೆ ರೋಮರಾಜಿಯುವರೆಡೆಗೆಱೆದ ।
ಪಾವನೋದಕವೆಂಬ ಸುಸ್ವೇದಮುಣ್ಮೆ ಭ ।
ಕ್ತಾವಳಿಗಳಾಯೆಂದು ನಲಿಯೆ ಪರಿಕಲಿಸಿ ಪರ್ಬಿತ್ತು ಶುಭವಾರ್ತೆ ಧರೆಗೆ ॥ ೩

ಪೌರಜನವೈದೆ ಹರ್ಷಾಮೃತಂದಳೆಯುತಿರೆ ।
ಭೋರೆಂದು ಬಹುವಾದ್ಯಸಂತತಿಗಳುಲಿಯುತಿರೆ ।
ಚಾರುಪುಷ್ಪಾಂಜಲಿಗಳುಂ ನಿವಾಳಿಯ ರತ್ನವುಂ ಬೀದಿಬೀದಿಯಲ್ಲಿ ॥
ಆರಯ್ಯೆ ಪರಿಕಲಿಸೆ ಮಕರತೋರಣಮುಖ್ಯ ।
ಚಾರುಪ್ರಕಾಶನಾವರಿಪ ಕಾಲದೊಳೆ ಮುಂ ।
ಗಾರಂತೆ ಚಿದ್ಘನಶಿವಾಚಾರ್ಯರೆಯ್ದುರುಕೃಪಾವರ್ಷಮಂ ಕರೆಯಲು ॥ ೪

ಭೂತಳಾಧಿಪನೆಬ್ಬು ಸಾಷ್ಟಾಂಗಮೆಱಗೆ ಸಂ ।
ಪ್ರೀತಿಯಿಂ ಪರಸಿ ಕುವರಂಗೆ ಗುರು ತನ್ನ ಕರ ।
ಜಾತಕರ್ಮಂಮಾಡಿ ಲಿಂಗೋಪದೇಶಪ್ರಭಾಪುಂಜಮಂ ಕರುಣಿಸಿ ॥
ಆತಂಗೆ ಮಂತ್ರಲಕ್ಷ್ಮಕನಾಮವಿಟ್ಟು ತ ।
ನ್ನಾತ್ಮೆಯಂ ಸತ್ಕರಿಸಿ ಪೊಡೆಮಡಿಸಿಕೊಂಡು ವಿ ।
ಖ್ಯಾತನೆಯ್ದಿದನು ನಿಜವಾಸಕ್ಕೆ ಪರಮಗುರುರಾಜ ನತಕಲ್ಪಭೂಜಂ ॥ ೫

ಅಣಿಯರದೆ ದಾನಧರ್ಮಂಗಳಂ ಸಕಲಜನ ।
ದಣಿವಂತೆ ಮಾಡಿಯಾರಾಧನೆಯ ಭಕ್ತ ತಿಂ ।
ತಿಣಿಗಿತ್ತು ಭೂತಿವೀಟಿಕೆವೆರಸು ಶಿವಪುರಂಗಳ ಸಮರ್ಪಣೆಯಮಾಡಿ ॥
ಗಣಪರ್ವಮಂ ತನಯನೊಗೆದ ಪನ್ನೆರಡು ದಿನ ।
ಮಣಿದೊಟ್ಟಿಲುಚ್ಚ ವದೊಳೆಸಗಿ ಸುಖದಿಂದೆ ಧಾ ।
ರಿಣಿಯ ಪಾಲಿಸುತೊಪ್ಪಿದನು ಸತ್ಯಚೋಳೇಂದ್ರ ನೃಪಸಮಯಶರಧಿಚಂದ್ರ ॥ ೬

ವೈರಿಭೂಮಿಪರ ವಕ್ಷಮನೊದೆವ ತೆಱದೆ ಚರ ।
ಣಾರವಿಂದಮನಾಡಿಪಂ ತನಗೆ ಮುಂದೆ ಮಾ ।
ರಾರಿಪ್ರಸನ್ನಕಾಲದೊಳಾಗಸದೆ ಬರ್ಪ ಮಣಿಖಚಿತಪುಷ್ಪಕವನು ॥
ಆರಯ್ವ ತೆಱದೆ ಲಂಬಣರತ್ನಕಂತುಕಮ ।
ಹಾರಾಮಮಂ ನೋಳ್ಪನಂಗಮೋಹಿಗಳಂ ಕು ।
ಮಾರನಪಹಾಸ್ಯಮಂ ಮಾಳ್ಪಂತೆ ನಸುನಗುವನೈ ಬಾಲಲೀಲೆಯಲ್ಲಿ ॥ ೭

ದೇಹಮೋಹದ ವಿರಾಗದ ಪಣ್ಣನೊಲಿದು ಮು ।
ನ್ನಾಹ ಸಿರಿಯಾಳನಣುಗಂ ಸವಿದನದು ತನಗೆ ।
ಬೇಹುದೆಂದಕ್ಕೆಗೆಯ್ಯುತ್ತಟುತ್ತಂ ವೀರಸೋಮವ್ವೆಯಂ ನುಂಗಿದ ॥
ಸಾಹಸವ ಬಿಡು ನಿನ್ನನೊಳಕೊಂಡೆನೆನ್ನ ಚಿ ।
ದ್ಗೇಹದೊಳಗೆಂದು ಸೊಡರಂ ನೋಡಿ ನಗುವನು ।
ತ್ಸಾಹದಿಂ ಪಂಚಶಕ್ತಿಯರ ಸೆಱಗವಿಡಿವೊಲಬಲೆಯರ ಮುಂದಲೆವಿಡಿವನು ॥ ೮

ಪಸುತನಂ ಪೋರ್ದದಂತಾನ್ವಾಘ್ರಪಾದಪದ ।
ಬಿಸಜಮಂ ತಾಳ್ದಂತಿರೆಳಲಿಟ್ಟ ಪುಲಿಯುಗುರಿ ।
ನೆಸಕದಿಂ ಭ್ರೂಮಧ್ಯದರಳೆಲೆ ಪರೀಕ್ಷಿಸೆಂಬಂದದರಳೆಲೆಯ ಚೆಲ್ವ ॥
ನೊಸಲಿಂದ ಫಲವಾಸನೆಯನಾಪ್ರಸಾದಮುಖ ।
ರಸವ ಮಾಡುವೆನೆಂಬಿನಿಂ ಮೆಱದು ಕಿವಿಗೆ ರಂ ।
ಜಿಸುವ ಮಾಗಾಯ್ಗಳಿಂದೆಸೆದನಾಮಂತ್ರಲಕ್ಷ್ಮಂ ಕ್ರಿಯಾಜ್ಞಾನಪಕ್ಷ್ಮಂ ॥ ೯

ನಗಿಸಿ ಕೈವೆರಲ್ಗ*ಳಿಂದಳ್ಳೆಯಂ ಜಕ್ಕುಲಿಸಿ ।
ಮಗನೆ ಬಾಯೆಂದು ಬರೆ ಸೆಳೆದಪ್ಪಿ ಶಿರಕೆ ಕರ ।
ಯುಗವಿಡುತ್ತಾನಂದದಿಂದ ಜೋಗುಳವಾಡಿ ವಾಸನೆಯ ಕಮ್ಮಲರ್ಗ*ಳ॥

ಅಗಜಾಧಿಪತಿಗರ್ಪಿಸುತ್ತಿತ್ತು ಯತ್ನದಿಂ ।
ಸೊಗಸುವಡೆಯಿಸಿ ಪುತ್ರನಂ ತಂದೆ ಮುದ್ದಿಸುವ ।
ಬಗೆ ಮೊದಲ್ ಸಂಚಾಕ್ಷರಿಯ ಮೋಹವಲ್ಲದೇಂ ಲೋಕವರ್ತನೆಯಪ್ಪುದೇ ॥ ೧೦

ದೋಸಮಂ ಕಂಡೊಡಾಂ ಬಳುಕುವೆಂ ಶರಣರೆನ ।
ಗಾಸೆ ಪಿಂಗೋಡೆ ಪಿಡಿವೆಂ ತತ್ಪದಾಬ್ಜಮಂ ।
ಭಾಸುರಾಚಾರದಿಂ ದಟ್ಟಡಿಯನಿಡುವೆನಾಂ ಮಿಟ್ಟುವಿನ ನಡುದಲೆಯೊಳು ॥
ಮೋಸವಿನ್ನಿಲ್ಲವೊಡ್ಡಾಟವೆನಗನ್ಯಧನ ।
ದಾಸೆಯೆಂಬಂತೆ ಕೈಕಾಲ್ಗಳಿಂದಂ ನಡೆದು ।
ಲೇಸೆನಿಪ ಭಿತ್ತಿಯಂ ಪಿಡಿದು ಮೆಲ್ಲಡಿಯಿಟ್ಟು ಪರಿದಾಡಿದಂ ಕುಮಾರಂ ॥ ೧೧

ಆರಮಾಕರೆ ಮುನ್ನ ಮಂತ್ರಿ ತನಗಿತ್ತ ಸುಕು ।
ಮಾರಮಿತವಚನನಂ ಮಂತ್ರಲಕ್ಷಕನನೊ ।
ಯ್ಯಾರದಿಂ ಸರಿಯಟ್ಟಿಜಂ ಸಲಹೆ ರಾಮಲಕ್ಷ್ಮಣನಕುಲಸಹದೇವರ ॥
ಓರಗೆಯೊಳುರೆ ಬಳೆದರೆಂಬುದನುಚಿತ ಕಾಮ ।
ವೈರಿಯಾಲಯದ ಕಂಬವನೊಡೆದ ಬೌದ್ಧನ ವಿ ।
ದಾರಿಸಿದ ರೇಮಯ್ಯ ರೇಚಯ್ಯಗಳ ಮಾಟಕ್ಕಿಯಿಂದೆ ಬಳೆದರು ಬಾಲರು ॥ ೧೨

ಹಿರಿಯ ಮಗನಾಡುತಿರೆ ಲಿಂಗಂ ಸಡಿಲ್ದು ಬಿ ।
ಟ್ಟಿರಲಜಿಸಲವನಸುವ ಬಿಡೆ ಲಿಂಗಮಂ ತಂದು ।
ಧರಿಸಲೊಡನೆಟ್ಟನವನಂ ತಂದೆ ಪೊಗಟಿ ಜಜಿದಾಕಿಜಿಯನಂ ಪರಿಕಿಸಿ ॥
ಇರುಳಯ್ಯನಭವನಂ ಕೊಂಡುಯ್ಯಲಟಿಯಲವ ।
ನರುಣೋದಯದೊಳೀಯೆ ಜೀವಿಸಿದ ಸತ್ಯೇಶ ।
ಶರಣ ಜಾಮಯ್ಯನಣುಗರ ಪೋಲ್ವ ನೃಪಕುಮಾರಕರು ಬರ್ದಿಂ ಬಳೆದರು ॥ ೧೩

ಅಮೆವಾಮೆ ಸಂಪೂರಣಚ್ಛಾಯೆ ಹೈಮವತಿ ।
ಸುಮನಸತಾ ಜ್ಯೋತ್ಸ್ನ ಸ್ವಧಾಕಾಂತಿ ಸುಶ್ರೀಗ ।
ಳಮರ್ದಿ*ರ್ದ ಹ್ರೀರೇವತಿಪ್ರೀತಿತುಷ್ಟಿಪುಷ್ಟಿಗಳೊಡನೆ ತನ್ಮಾನಸಿ ॥
ಅಮೃತಾಖ್ಯಷೋಡಶಕಲಾಭರಿತಪೂರ್ಣಚಂ ।
ದ್ರಮನಂತೆ ರಾಜಿಸುವ ಹದಿನಾಱು ವರ್ಷದೊಳೆ ।
ರಮಣೀಯಮಾದನಗ್ರಜನೊಳ್ ಕುಮಾರ ಲಕ್ಷಣವಾಕ್ಸುಧಾಳಿಪೂರ ॥ ೧೪

ಸ್ಮರ ವಿಕ್ರಮಾಂಕ ದೇವೇಂದ್ರ ಯಕ್ಷೇಶ್ವರರು ।
ಶರಶಸ್ತ್ರಕರಿತುರಂಗಾಭ್ಯಾಸದಲ್ಲಿ ಸರಿ ।
ದೊರೆ ಕುಮಾರರ್ಗೆಂಬುದನುಚಿತಂ ತ್ರಿಪುರಸಂಹಾರನೇಣಾಧಿನಾಥ ॥
ವರನನಿರಿವತ್ತ್ತಾಂಡಿಯರ ಚೊಕ್ಕನೈನಾರ ।
ಕರುಣದೆ ವಿರಾಜಿಸುವರೆನಲುಚಿತನಾಲಸ ॥
ದ್ವರಗುಣಿಯ ಶಿವಭಕ್ತಕುಲಶಿರೋಮಣಿಯ ದಿವ್ಯಜ್ಞಾನಗಗನಮಣಿಯ ॥ ೧೫

ಇಂತು ಕುವರರು ನಾಡೆ ಮೆಱೆಯೆ ಧರೆ ಕೊಂಡಾಡೆ ।
ಸಂತಸದ ಚೈತ್ರಕಾಲಂ ಮೂಡೆ ದಕ್ಷಿಣದಿ ।
ಶಾಂತದೊಳಗೆಲರು ತಣ್ಣನೆ ತೀಡೆ ಕೋಕಿಲಂಗಳ್ ಕೊರಲ್ದೆರವುಮಾಡೆ ॥
ಕಂತು ನಲಿದಾಡೆ ವನಿತೆಯರಳುಪಿನಿಂ ನೋಡೆ ।
ಮುಂತೆ ಪಾರ್ವಲರ್ವ*ಕ್ಕಿ ಝುಂಕಾರದಿಂ ಪಾಡೆ ।
ಕಾಂತಸಹಕಾರಮಾಕೆಂದಳಿರ್ಗಳೊಳ್ ಕೂಡೆ ರಾಜಿಸಿದುದಾವಸಂತಂ ॥ ೧೬

ಕಂಡು ವನಪಾಲನಾಸುರಗಿಪ್ರಸೂನಮಂ ।
ಕೊಂಡು ಧೃತರಕ್ತಕರವೀರನೇಟ್ತಿಂದು ಭೂ ।
ಮಂಡಲಾಧಿಪ ಕೇಳು ಕಾಮಚಕ್ರೇಶ್ವರನ ದಂಡು ವನದೊಳಗೆ ಬಿಟ್ಟು ॥
ಪುಂಡರೀಕಾಕರಂ ಬಂಡಾಯ್ತು ಶುಕಪಿಕಂ ।
ತೊಂಡುಗೆಡೆದುಱಿ ಕೂಗಲಳ್ಕಿ ನಮಿಸುತೆ ಭಯಂ ।
ಗೊಂಡು ಪಲ್ಗಱಿಯುತವೆ ದಾಳಿಂಬವಿನ್ನಾವಸಂತವೇಱೀಱಿಂದನು ॥ ೧೭

ಎಂದ ಮಾತಂ ಕೇಳ್ದು ನೂತನಾನಂಗನಾ ।
ನಂದರತಿಸಹಿತ ವೈಭವದಿಂದ ಪೊಱಮಟ್ಟು ।
ಪಿಂದೆ ಕೋಟ್ಯನುಕೋಟಿವನಿತೆಯರ ಸೌರಂಭದಿಂದನ್ವೃತವತಿ ನಡೆಯಲು ॥
ಬಂದು ಬನಮಂ ಪುಗುತ್ತಂದಾವಸಂತನೊಲ ।
ವಿಂದ ಸುಖದೊದವೀಯಲಿಂದಾನು ಸರ್ವೇಶ ।
ನಂ ದಯಾನಿಧಿಯನಾಸ್ಕಂದಪಿತನಂ ಪೂಜಿಪಂದಮಂ ಮಾಱ್ಪೆನೆಂದು ॥ ೧೮

ಕುಸುಮರಜದಿಂದ ಫಲರಸದಿಂದ ನಾಡೆ ನ ।
ರ್ತಿಸುವ ಶಿಖಿಯಿಂದ ತೆಂಬೆಲರಿಂದನಂತ ರಂ ।
ಜಿಸುವ ಕನಕಾಬ್ಜ ಪಙ್ತಿಗಳ ನಿರ್ಮಳಜೀವನಂಗಳ ಸರೋವರಗಳ ॥

ಒಸೆದು ಸಾರ್ದೊಪ್ಪುತಿಹ ಹಂಸಮಿಥುನಂಗಳಿಂ ।
ದೆಸೆವಷ್ಟಮೂರ್ತಿವತ್ತಾದ ತದ್ವನದೇವಿ ।
ವಸುಧಾಧಿಪತಿಯನುಪಚರಿಸಂತೆ ಮೆಱೆದುದಂತಾವನಂ ಮಿಗೆ ಪಾವನಂ ॥　　೧೯

ಕಲಮಾಗ್ರಚಿಂತಾಮಣಿಕ್ಷೇತ್ರಮಧ್ಯದೊಳ್ ।
ತೊಳಪ ವನದೊಳಗಮೃತದಿಂದನಿಮಿಷಾಳಿಯಿಂ ।
ನಳನಳಿಪ ಪಾರಿಜಾತದಿ ಮಾರುತಸ್ಪರ್ಶದಿಂ ಸೋಗೆಗಳ ಕಣ್ಗಳ ॥
ಕಳೆಗೆದಱುತಿಹ ಶಿಖಿಗಳಿಂ ಧರ್ಮರಕ್ಷಕಂ ।
ಜಲಧಿಮುದ್ರಿತಧರಾಧೀಶ ಪಾವನ ಶಿವನ ।
ಕಳೆಯಂಶ ಚಿನ್ಮಾನಿನೀಶ ಸೌರಂಭಾಳಿಯಿಂದ ಸತ್ಯೇಂದ್ರನೆಸೆದಂ ॥　　೨೦

ಪೂರ್ಣಚಂದ್ರಾನನಾಕರ್ಣನಯನದ ಸಮಾ ।
ಕೀರ್ಣವಹ ಮಲ್ಲಿಗೆಯಲರ್ ನಾಡೆ ರಾಜಿಸ ನ ।
ವಿರ್ಣವಕದೊಳ್ನುಡಿಯ ಕನ್ಯೆದಿಲಮಳ್ಗೆ*ಮಿಯುದೀರ್ಣತಾಪಸಧೈರ್ಯದ ॥
ಸ್ವರ್ಣಘಟಕುಚಯುಗದ ಚೂರ್ಣಹಿಮತಾಂಬೂಲ ।
ಪರ್ಣಪೂಗಂಗುಡುವೆಲರ್ ನಯದ ಬಿಜ್ಜಲದ ।
ವರ್ಣನೆಯ ಸತಿಯರೊಳು ಮಾರ್ನಡೆದಳರಸಿ ಸೌಖ್ಯಾರ್ಣವದ ತೆರೆಗಳಂತೆ ॥　　೨೧

ಇಂದೀವರಾಕ್ಷಿಗಳಿಗಾಕಮಲಮುಖಕೆ ಸುಖ ।
ವೆಂದೆನಿಸಿತಾರಾಜಹಂಸಗಮನಂ ಬಱಿಕ ।
ಮಂದಗಜಯಾನದಿಂದೂರಿಂಗೆ ಹೊಱಗಾಗಿ ಚೆಲ್ವಿನೊಪ್ಪುವ ಬಾಸೆಗೆ ॥
ಹಿಂದಾದವೆಂದದಿರುವಂತೆಸೆವ ಪೊಱಮಾರ್ಗ ।
ಳಿಂದೊಪ್ಪುವಾಸತಿಯರಾನಂದದಿಂದಲೆ ।
ಯ್ತಂದರಾಕೆಯ ಕೂಡೆ ತಾಪಸರು ಕೆಟ್ಟೋಡೆ ಕಾವನರಲಂಬ ಪೊಡೆ ॥　　೨೨

ಎಸಗಲ್ಕೆರಾವಣಾಧಿಕರಾವವಂದು ನಿರ ।
ವಿಸುತಲಾಪುಂಡರೀಕಾಕರಂಬುಗಲು ರಂ ।
ಜಿಸುವಾಮನಃಪ್ರೀತಿಯಿಂದ ಕುಮುದಾಂಜನಾಲಂಕೃತಾಕ್ಷಿಯರಬ್ಜದ ॥
ಪೊಸ ಪುಷ್ಪದಂತರಂಗದ ಪರಾಗದೊಳೆ ಸಮ ।
ರಸವಾದ ನೀರ್ದುಱುಂಕಿದರು ಖೋಯೆಂದು ಗ ।
ರ್ಜಿಸುತಲಂತಾಸಾರ್ವಭೌಮನ ಮಹಾಸುಪ್ರತೀಕವಂ ನೆಱೆ ಮುಸುಕಲು ॥　　೨೩

ಕಂಬುಕಂಧರೆಯರಾಡಂಬರದ ರತ್ನದಾ ।
ಚೆಂಬೊನ್ನಿನಂಡೆಗಳ ತುಂಬಿ ಪರಿಮಳಮಿಶ್ರ ।
ದಂಬುಗಳ ಕಟಕರ್ಪುಣರೆಂಬ ರವದಬಲೆಯರು ಮುಂಬರಿದು ಚೆಲ್ಲುವಲ್ಲಿ ॥
ಅಂಬರದೊಳೆಯ್ದೆ ನೆಱೆ ಬಿಂಬಿಸುವ ಸುರಚಾಪ ।
ವೆಂಬೊಲ್ ಪಯೋಧರವ ಚುಂಬಿಸುವ ಧಾರೆ ಮಿಗೆ ।
ಶಂಬರಾಹಿತನ ಕೂರಂಬನಿಱಿಕೆಯ್ದುವೇನೆಂಬೆನಾಜಲಕೇಳಿಯ ॥ ೨೪

ಕಡೆಗಣ್ಣ ಕಾಂತಿ ಸುಲಿಪಲ್ವೆಳಗು ನಖದ ಬೆ ।
ಳ್ಪಡಸಿ ಪಸರಿಸೆ ಕೊಳನ ಜಳಮೈದೆ ಚೆಲ್ವ ಪಾ ।
ಲ್ಗಡಲಂತೆ ಮೆಱೆಯಲು ಮುಟುಂಕಿ ನಿಂದಮೃತವತಿ ಸಾಕ್ಷಾತು ಕಮಲೆಯಿವಳ ॥
ಎಡೆಯೊಳಾಂ ಸತ್ಯೇಂದ್ರಚೋಳನಿರೆಯೆಂದು ಪೊಱ ।
ಮಡೆ ನೀನು ಪುರುಷೋತ್ತಮಂ ಪೋಗಬೇಡ ನಾಂ ।
ಬಿಡೆನೆಂದು ಮೌಕ್ತಿಕದ ಸೇಸೆದಳೆವಂತೆ ಚೆಲ್ಲಿದಳು ನೀರ್ವನಿಗೆದಱಲು ॥ ೨೫

ಇಂತು ಜಳಕೇಳಿಯಂ ರಚಿಸಿ ಪೊಱಮಟ್ಟು ಮಿಗೆ ।
ಸಂತಸದೊಳ್ಮೆದೆ ದಣಿಬವನುಟ್ಟು ಹಣೆಯೊಳೆ ಸ ।
ಮಂತು ಭಸಿತವನಿಟ್ಟು ವನಿತಾಜನಕ್ಕೆ ವಸ್ತ್ರಾಭರಣತತಿಯ ಕೊಟ್ಟು ॥
ಕಾಂತೆಯರ ಕೆಲಬರಂ ಕುಸುಮಕ್ಕೆ ಬೀಱುಕ್ಮಾಟ್ಟು ।
ಮುಂತೆ ರಚಿಸಿರ್ದ ಗದ್ದುಗೆಗೆ ಬಂದಳವಟ್ಟು ।
ತಿಂತಿಣಿಸಿದುಪಕರಣಮಂ ಶಿವಕುಮಾರನೃಪನೀಕ್ಷಿಸಿದನಱ್ತವಟ್ಟು ॥ ೨೬

ಅನಿತಱೊಳ್ ವಲ್ಲಿತರುಗುಲ್ಮಕಾಸಾರದೊಳ್ ।
ಘನಮಾಗರಲ್ದಾತೊಡಂಬೆಯ ಸಡಿಲ್ದ ಕೀ ।
ಟನಿಕಾಯಮುಱಿ ಸಾರ್ದ ಪಱಮೆಗಳು ಮುಸುಡಿಟ್ಟು ಪೀರ್ದ ಪುಷ್ಪಗಳನುಱಿದು ॥
ತನಿಗಂಪನೀವ ಸೊಂಪಿಂದಲರೆ ಬಿರಿದ ಚೆ ।
ಲ್ವಿನ ಸೊಬಗಿನುಳ್ಳಲರ ತಿಱಿದರಬಲೆಯರು ಪಾ ।
ವನಮಲ್ಲಿಕಾಸ್ಮೇರಕನಕಪ್ರಭಾಂಗಸೌಂದರಜಾತಿ ಪದ್ಮಿನಿಯರು ॥ ೨೭

ಅತ್ತೆಸೆವ ಮಾವನಳಿಯಂ ಮುಗಮುಗಿಪ ಕಂಪು ।
ವೆತ್ತ ಕುಸುಮವನೀಕ್ಷಿಸೊಸೆಯುತುಂ ಮನದೊಳಂ ।
ದತ್ತಿಗೇಕೀಹುಟುಕುತನವೆಂದು ಭಾವಜಂ ತಮ್ಮೈಯ್ದನೆಯ ಬಾಣದ ॥

ಉತ್ತಮದ ಕರ್ನೆಯ್ದಿಡಲೆಂಬ ಕಣ್ಮುಚ್ಚಿದುವೆ।
ನುತ್ತ ನಾದಿನಿದುಗಂಪಿಂ ನಗುವ ತಾವರೆಯು।
ವೊತ್ತಮಂ ನೋಡೆಂಬ ನೆವದೆ ಬಂಧುಗಳ ನೆನೆದಾಡುತಿರಲಾಸತಿಯರು॥ ೨೮

ಭಾವಕಿಯರ್ಬೈದೆ ಪೂಜಾಸ್ಥಳಕೆ ನಡೆತಂದು।
ದೇವ ಚಿತ್ತೈಸಯ್ಯ ಸಿರಿವೆತ್ತು ರಾಜಿಸುವ।
ತಾವರೆಯ ಕುಸುಮಗಳಶೋಕೆಗಳ ಚೂತದೊಳ್ಪಳಿರ್ಗ*ಳಂ ಮಲ್ಲಿಗೆಗಳ॥
ಪೂವ ಕರ್ನೆಯ್ದಿಲ್ಗಳಟ್ಟದಂ ಮನ್ಮಥಮ।
ಹಾವೀರನೀಶಂಗೆ ಸೋಲ್ತಸ್ತ್ರಸಂಕುಳವ।
ನೇವೇಳ್ವನುಳಿದ ಪುಷ್ಪಗಳನೆಂದೀಯುತಿರ್ದರು ರಾಯನಾನಂದಿಸೆ॥ ೨೯

ಚಾರು ಸದ್ಯೋಜಾತ ವಾಮದೇವಂ ಮಹಾ।
ಘೋರ ತತ್ಪುರುಷೇಶಾನದಿಂ ಧರೆಜಲವನಲವನಿಲ।
ತಾರಾಧ್ವನುವಬಿಂ ನಿವೃತ್ತಿ ಪ್ರತಿಷ್ಠಿ ವಿದ್ಯಾತಿಶಾಂತ್ಯಾತಿಕೆ (?)॥
ಕಾರಣದಿ ಕಪಿಲಾಸಿತಾರುಣಾಮಲ ಚಿತ್ರ।
ಸಾರನಂದಾಭದ್ರೆ ಸುಮನೆ ಸುಸಿಲೆಯು ಸುರಭೆ।
ಯೀರವ್ಯುಪಶುವಿಂ ವಿಭೂತಿಭಸಿತಂ ಭಸ್ಮವಾಕ್ಷಾತಿರಕ್ಷೆಯೆಂದು॥ ೩೦

ಭೂಪನಾನಂದದಿಂದಂ ಭಸಿತಸರ್ವಾಂಗ।
ಲೇಪನಾಗುತ್ತಂ ತ್ರಿಪುಂಡ್ರಭಾಳಾದಿಯಿಂ।
ತ್ರೈಪುರಾರಿಯ ನೆನೆದು ರುದ್ರಾಕ್ಷಿಗಳನಾಗಮಕ್ರಮದೆ ಧರಿಸಿ ಬಳಿಕ॥
ಶ್ರೀಪಂಚವರ್ಣಮಂ ಜಿಹ್ವೆಯೊಳ್ ಜಪಿಸುತ್ತ।
ಲಾಪಾವನದ ವೇದನಾರುದ್ರ ಯೆಂಬರ್ಥ।
ದಾಪರಬ್ರಹ್ಮ ತಾನಾಗಿ ಪದ್ಮಾಸನದೊಳಿರ್ದು ಮತ್ತಾಚೋಳನು॥ ೩೧

ಶಿರದೊಳೇಕೋರುದ್ರ ನೆತ್ತಿಯೊಳ್ ತ್ರಿಣಯನಂ।
ಪರಿವೃತಂ ತತ್ವಷಟ್ತ್ರಿಂಶಾಧಿಪಂ ಜ್ಞಾನ।
ವರಸತ್ಕ್ರಿಯಾಕರ್ಣಯುಗದೊಳಾ ಚಂದ್ರಕಳೆ ತೋಳ್ಗಳೊಳು ತರಣಿಯಂಶ॥
ಎರೆಡು ಮುಂಗೈಯೊಳಾಗ್ನೇಯತತಿಯ್ಯೆವಡಿಸಿ।
ಯುರದಲ್ಲಿಯುಪನಿಷದ್ಗಳದಲ್ಲಿ ಷಟ್ಸ್ಥಳವ।
ದಿರದೆ ಪದಿನೆಂಟುಮುಡಿ ರುದ್ರಾಕ್ಷಿಯುಪವೀತ ಜಪಮಾಲೆಯುಗಮುವಂಗೆ॥ ೩೨

ಚತುರಸಷಡ್ದಶರವಿಕಳಾದ್ವಿಗುಣನಾಂಬುಜಾ ।
ಶ್ರಿತದಳಾಧಾರವಾಸ್ವಾದಿಷ್ಟವಣಿಪೂರ ।
ಯುತದನಾಹಿತ ವಿಶುದ್ಧಾಗ್ನೇಯತಟದಿನಾಗ್ನಿಸ್ಫಟಿಕಸುರಧನುವಿನ ॥
ವಿತತರಕ್ತಾಭ್ರದಾಚಾರಗುರುಶಿವಚರಾ ।
ನ್ವಿತಸುಪ್ರಸಾದ ಮಹದಾಖ್ಯನೆ ಶಿಖಾಸ್ಥಲಾ ।
ಶ್ರಿತಸುಪ್ರಕಾಶಗುರುದತ್ತಲಿಂಗವ ಕರದೊಳಳವಡಿಸಿದಂ ಚೋಳನು ॥ ೩೩

ವ್ಯೋಮಕೇಶನನಾದಿಮೂರ್ತಿಯಂ ನಾಡೆ ವಾ ।
ಚಾಮತಿಗಭೇದ್ಯನಂ ಶ್ರುತಿತತಿಗಗವ್ಯನಂ ।
ಶ್ರೀಮನೋಂತಃಕರಣದುರ್ಲಭನನುರುಗುಣಾಶಕ್ಯಕಾಲಾಂತಭವನ ॥
ಸ್ವಾಮಿ ವರಶುದ್ಧವಿದ್ಯಾರೂಪನಂ ನತ ।
ಪ್ರೇಮಿ ಷಟ್ತ್ರಿಂಶತತ್ವಾತೀತಶಂಭುವಂ ।
ಭೂಮಿಪಾಲಂ ನೋಡಿದಂ ಕೂಡೆ ಪಾಡಿದಂ ಶಿವಭಕ್ತಿಯಿಂ ಬೇಡಿದಂ ॥ ೩೪

ಹೊನ್ನಿತಂದೆಗಳನಣುಮೂರ್ತಿಯಾಯ್ದಕ್ಕಿಯ ।
ತ್ಯನ್ನತದ ಮಾರಿದೇವಗಳ ಹರದತ್ತಾರ್ಯ ।
ರನ್ನಾಡೆ ಗೊಗ್ಗವ್ವೆಯಂ ಕಲಿಯನಾರುವಂ ಕರಿಕಾಲಚೋಳನೃಪನಂ ॥
ಚೆನ್ನಿದಾನದ ರೇಚಿ ತಂದೆಗಳ ಪಾದಮಂ ।
ತಾಂ ನೆನೆದು ಲಸದಷ್ಟವಿಧಪೂಜೆಯಂ ರಚಿಸಿ ।
ದಂ ನವ್ಯಸುಗುಣಿ ಭೂಪಾಲನುತಶೀಲ ಸುವಿಶಾಲ ಸದ್ಭಕ್ತಿಲೋಲ ॥ ೩೫

ಮಂಡಿಗೆಯ ಮಾದರಸರಿಷ್ಟದ ವೃಷಾಂಕಂಗೆ ।
ಖಂಡಿತಾಮೃತಕಿರಣಜೂಟಂಗೆ ಕಮಲಗ ।
ರ್ಭಾಂಡಭಾಂಡಸುಪೂರ್ಣಸಿತಕೀರ್ತಿಮಯಗೆ ಖರ್ಜೂರಪರ್ವತವಾಸಿಗೆ ॥
ಕಂಡು ನುತಿಸಿದರ ಮನದನ್ನನೊಡನಾಶರಣ ।
ರುಂಡು ಮಿಕ್ಕಾಶೇಷಮಂ ಶಿವಂಗಿತ್ತು ಕೈ ।
ಕೊಂಡು ಭೂಪಂ ನಿಯೋಗಂಬೆರಸಿ ಸುಖದಿಂ ವಸಂತಮಾಸವ ಕಳೆದನು ॥ ೩೬

ಪರತರಬ್ರಹ್ಮಾನವರತಸಂತೃಪ್ತಾಹಿ ।
ಧರ ತರಣಿರೇಂದುದೃಕ್ಸುರತತಿಸ್ತುತ್ಯ ಭಾ ।
ಸ್ಕರತನು ಭವದ್ವಿಷಾವಿರತ ನತಸಜ್ಜನಾಮರತರು ಕ್ಷಪಗವರದ ॥

ಕರತಳ ಶ್ರೀನಾಥ ವರತತ್ವಚಯಪ ಮುರ ।
ಹರತನುಜಶತ್ರು ನಿರ್ಜರತಟನಿಭೃನ್ಮೃಹೇ ।
ಶ್ವರದಹರ ಸಲಹೆಂದು ನಿರತವೆಜಗಿದ ಭಯಾತುರನತನ್ನೃಹರಿಶರಭಗೆ ॥　　೩೭

ಇದು ಸಕಲಭಕ್ತ್ರಪದಪಂಕೇಜರೇಣುವು ।
ಸ್ತ್ರದ ಮಲ್ಲಣಾರ್ಯನಾಚೇರಮಾಂಕಂಗೆ ಬೆಸ ।
ಸಿದ ಭಕ್ತಸತ್ಯೇಂದ್ರುಚೋಳಕೃತಿ ಭಾವಚಿಂತಾರತ್ನವಮಳಕರ್ಣ ॥
ಹೃದಯ ಮಸ್ತಕ ವದನ ಸರ್ವಾಂಗ ಸೌಖ್ಯಕಾ ।
ಸ್ಪದಮುಖಿಳಸಜ್ಜನರ್ಗೆ* ಪಂಚಾಕ್ಷರಿಯ ಮಹ ।
ತ್ವದ ಬೋಧೆಯೆಂದೋದಿದೊಡೆ ಕೇಳಿದರಿಗಿಷ್ಟಸಿದ್ಧಿ ಸರ್ವರಿಗಪ್ಪುದು ॥　　೩೮

ನಾಲ್ಕನೆಯ ಸಂಧಿ ಸಮಾಪ್ತಂ

---

## ಐದನೆಯ ಸಂಧಿ

ಪಲ್ಲವಿ ॥ ಗೆಲುತೆ ಸಿಂಹಳನೃಪನ ತತ್ಪುತ್ರಿಯರ ಮಂತ್ರಿ ।
ಸುಲಭ ಸುಕುಮಾರರ್ಗೆ ಮದುವೆಯಂ ಮಾಡೆ ಭೂ ।
ಲಲನಾಧಿಪಂ ಚೋಳನಾರಾಧಿಸುತ್ತಿರ್ದನಂದುಮಾವಲ್ಲಭನನು ॥

ಬೇಡವೆಲೆ ದೇವಯೆನ್ನೊಳು ಗರ್ವ ನಿನ್ನ ಗುಣ ।
ವಾಡಿದರೆ ಹುರುಳಿಲ್ಲ ನಂಬಿಯೇಕಾಂತದೊಳ್ ।
ಕೂಡುವಂಗನೆಯುಪ್ಪ ಪೆಜವೆಣ್ಣ ಮೊಲೆಯೊಳಗೆ ನೀಂ ಕೈಯನಿಕ್ಕಲಾತಂ ॥
ನೋಡುತಿಲೆಲೇ ಶಿವನೆ ಎಂದೊಡಳ್ಕುತ್ತ ಕೊಂ ।
ಡಾಡಿ ಸಾಸಿರ ಪೊನ್ನ ತೆತ್ತ ಮುರ್ಯವನೀಗ ।
ಲಾಡುವೆನು ಶರಣರೊಳದೇಕೆ ನೀನೆಮಗೆ ಭಕ್ತಿಯ ಲಂಚವಿತ್ತು ಬರ್ದು*ಕು ॥ ೧

ಆ ವಸಂತೋತ್ಸಾಹವುಂ ಕಳೆದು ಸಂತಸದೆ ।
ಭೂವರಂ ಮಂತ್ರಿಯ ಮೊಗಂನೋಡಿ ಪುರಕೆ ಠಾ ।
ಜೀವನಲೋಚನೆಯುವೃತಿವತಿವ್ಮುಖ್ಯವಾದ ಪಲ್ಲಕಿಗಳಂ ತೆರಳವೇಟ್ಟು ॥

ಪಾವನಸ್ಥಲಕೆ ನಡೆತಂದು ತುರಗನನಡರು।
ವಾವೇಳೆಯೊಳಗೊರ್ವ ಶಬರನಾಯಕನ ನಿಜ।
ಕೋವಿದಸಖಂ ತ್ವರಿತದಿಂದಲುಪಗಮಿಸೆ ದೂರದೊಳವನ ಬರವನಱಿದು॥ ೨

ಕ್ಷೋಣೀಶನೀಕ್ಷಿಸುವ ದೃಷ್ಟಿಭೇದವನಱಿದು।
ಜಾಣರೆನಿಸಿರ್ದ ಕಂಬಿಯ ಕಲಿಗಳಾಕ್ಷಣದೆ।
ಕಾಣಿಸಲು ಶಬರನ ಸಖಂ ಬಂದು ಸಾಷ್ಟಾಂಗದಂಡದಿಂ ನಮಿಸಿ ನಿಂದು॥
ಮಾಣಿಕವನೊಂದ ಕಾಣ್ಕೆಯನಿತ್ತು ಕೈಮುಗಿದು।
ಮಾಣದಡಿಗಡಿಗೆ ಗಂಭೀರವಾರಾಶಿ ಮ।
ತ್ಪ್ರಾಣ ಜಯಜೀಯ ರಕ್ಷಿಪುದೆಂದು ಕೀರ್ತಿಸುತ ನಿಂದನಾಸಮಯದಲ್ಲಿ॥ ೩

ಆರತ್ನದಧಿಕಪ್ರಕಾಶಮಂ ನೋಡುತ್ತ।
ಭೂರಮಣನಖಿಳವಣಿಜರ ಪರೀಕ್ಷಿಪುದೆನೆ ಮ।
ಹಾರಾಯ ಚಿತ್ತೈಸು ನವಕೋಟಿ ಬೆಲೆಯೆನಲು ವಿಷ್ಣುವಿನ ಬಾಟಿಕ್ಕೆಯೈಸೆ॥
ಸಾರಕೌಸ್ತುಭನೆನಲು ಜಾರಗೋಪಾಂಗನೆಯ।
ಪೇರುರದ ಸೋಂಕು ಚಿಂತಾರತ್ನವೆನೆ ತ್ರಿದಿವ।
ದೂರಸಂಪತ್ತಲಾ ನಾರದಮುನೀಶನ ಮನೋರಾಗವೆನೆ ಮೆಚ್ಚಿದಂ॥ ೪

ನೆಟ್ಟನಾಪ್ರೌಢವಣಿಜರ್ಗಂಗಚಿತ್ತಮಂ।
ಕೊಟ್ಟು ಸತ್ಯೇಂದ್ರಚೋಳಾಧೀಶನಾಚರನ।
ನಿಟ್ಟಿಸಲು ಜೀಯ ಬಿನ್ನಪ ದಕ್ಷಿಣಾಂಬುಧಿಯ ಸೀಮೆಯು ಕಿರಾತನಗರ॥
ಪುಟ್ಟಿದೂರಲ್ಲಿಗಧಿಪರು ನಮ್ಮವರು ನಿಮ್ಮ।
ಮೆಟ್ಟುಗಳ ಲೆಂಕರಾನಾಯಕನ ನಾಮವಳ।
ವಟ್ಟಿರ್ಪ ಕಾಳಮೇಘಂ ಸುಖದೊಳಿರೆ ಮಹಾಗ್ರೀಷ್ಮಕಾಲಂ ಬಂದುದು॥ ೫

ಸ್ಫುಟಕವೆಂದೆಂಬ ಕಂದದಿನೊಗೆದು ನಾಡೆ ಛಿಣಿ।
ಛಿಟಲೆಂಬ ಕಿಡಿಗಳೇ ಮೊಳೆಗಳಾಸೂರ್ಯನು।
ತ್ಕಟದ ಕಿರಣಂಗಳೇ ವಲ್ಲಿಯುಗ್ರದ ಭಾಸ್ಕರನೆ ಫಳಂ ಪಕ್ವಮಾಗಿ॥
ಪುಟವೇಱಿಯುಕ್ಕುತುಂ ಬ್ರಹ್ಮಾಂಡವೆಂದೆಂಬ।
ಘಟದೊಳು ರಸಂ ತೀವಿತೆನೆ ಮರೀಚಿಯ ಜಲಂ।
ಘಟುವಾಗಲಾಗಿ ಬೇಸಗೆ ಬೆಳೆದು ಪಣ್ತದೆಲೆ ದೇವ ಚಿತ್ತೈಸೆಂದನು॥ ೬

ಸೂರಕಿರಣಂಗಳಿಂ ಬೆಂದು ತಲೆಬಿರಿದು ಮದ।
ವಾರಣದ ಮುತ್ತುಗಳು ಸುಱಿಯೆ ಕೆಱೆಯುಗೆ ಕಾಯ್ದು।
ನೀರಿಂದೆ ಮೆಯ್ಯ ಸಮ್ಮ್ರಂ ಸುಗಿದು ಬೆಳ್ಳಾನೆಯಾದ ಬಱಿಕಿಳೆಯೊಳಿರದೆ॥
ಸಾರಿತದು ಸಗ್ಗಮಂ ಪಿಂದಬ್ಧಿಯಂ ಪೀರ್ದ।
ವೀರಕುಂಭಜನಾಮಮಾಮಣಿಗೆ ಸಲಲಳ್ಕಿ।
ನಾರಿಯುಱತಾತಟಾಕಂ ಬೀಡೆವರಿದುದೇನೆಂಬೆ ಬೇಸಗೆಯುಗ್ರಮಂ॥ ೭

ಇಂತಪ್ಪ ಕಾಲದೊಳು ಬೇಡವಡೆಯಂ ಮೊಱೆವ।
ನಂತವಾದ್ಯಂಗಳಿಂ ತಟ್ಟಲಗುಗಳ ಮಿಱುಪ।
ಕಾಂತಿಯಿಂ ಬೇಂಟೆಗುಜ್ಜುಗಿಸಿ ವಿಪಿನಿಕೆ ನಡೆವೆನಲ್ಲಿ ಶರತತಿಯ ಕಱೆವಂ॥
ದಂತಿಗಳ ತಲೆಯ ಮುತ್ತುಗಳುದುರೆ ಸೀಟಿಶ್ವನಿದಿ।
ರಾಂತ ಕೋಡುಳ್ಳ ಮೃಗಕೆನ್ನಲುಬ್ಧಕಸೇನೆ।
ಯಂತಕರಲಾ ಭಾಪೆನುತ್ತಲ್ಲಿಗೆಯ್ದಿದಂ ಕಾಳಮೋಘಂ ಹರ್ಷದಿಂ॥ ೮

ಆಗಮುಕ್ಸ್ನಪ ಶಾಬರವ್ರಾತ ಶಾಂಡಿಲ್ಯ।
ರಾಗಿಸುವ ರೇಖಾಜಟಿವ್ರಾತ ಶಲ್ಯಾದಿ।
ಯೋಗದಿಂ ಪೊತ್ತಗೆಗಳಂತಾದಧೀಚಿಹರಿಗಳ ಯುದ್ಧರಂಗದಂತೆ॥
ಮೇಗೆ ಮಿಗೆ ಪಕ್ಕಣದ ದುರ್ದಿನದ ವರಗೌತ।
ಮಾಗಾರದಂತೆ ಸುರಪುರಿಯಂತೆ ವರಮಹಾ।
ಭಾಗಮುನಿಯಂತೆ ಕೌರವಸೇನೆಯಂತೆ ರಾಜಿಸುವ ಪೇರಡವಿಯಲ್ಲಿ॥ ೯

ಇದೆಯಣಿಲೆಯೊತ್ತಿನೊಳೆ ಸಿಂಗದುಗುರ್ಗೊನೆವಜ್ಜ।
ಯಿದೆ ಸೋಮವಲ್ಲಿಯಡೆಯೊಳ್ ಮೊಲದ ಕಾಲ್ಗುಱುಹು।
ಇದೆ ರಾಜವೃಕ್ಷದ ಸಮೀಪದೊಳಗೆರಲೆಗಾಲಿಂ ತುಱಿದ ನೆಲದ ಠಾವು॥
ಇದೆ ಬಿಲ್ವಮೂಲದೊಳ್ ಪುಲಿಯ ನಖಚಿಹ್ನಮಿಂ।
ತಿದೆ ಸರ್ವಮೃಗಪಕ್ಷಿಗಳ ಪಕ್ಕೆಯೆಂದು ಪರಿ।
ದೊದಱುವಾ ಪಡೆವೆರಸಿ ಬೇಂಟೆಯಾಡುತ್ತಿರ್ದನಂದು ಶಬರಾಧೀಶನು॥ ೧೦

ತೋಱು ಬೇಡಿತಿಯೆನ್ನ ಕಣ್ಗೆಣೆಯೆ ನೀವೆನು।
ತ್ತಾಱುತೆರಲೆಗಳನಿಸಲದು ತಾಗಿತಿಲ್ಲದೇಂ।
ಕಾರಣಂ ಕೇಳಬಲೆಯಾನೆಂದುದಿಲ್ಲವದು ಕವಿವಚನಮೆನಲು ಮುಳಿದು॥

ಕೂರಂಬಿನಿಂದಲೆಚ್ಚೊಡೆ ಕಣ್ಣು ತಾಗಿ ತಂ।
ದಾರಾಕ್ಷಸಾರ್ಯರ್ಶುಕ್ರನನದುನಿಮಿತ್ತಂ ವಿ।
ಚಾರಿಸಲ್ಕವಗೊಂದು ಕಣ್ಣಿಲ್ಲಮದು ದೃಷ್ಟಮಲ್ಲದವಳೆಂಬು ಹುಸಿಯೆ॥ ೧೧

ಈಪರಿಯ ಬೇಂಟೆಯಾಡುತ್ತುಮಿರೆ ಸಿಂಹಳ।
ದ್ವೀಪದಿಂದೆಮ್ಮ ತೋಹಿಂಗೊಂದು ಸಿಂಹಮಾ।
ಟೋಪದಿಂ ಬರಲೆಮ್ಮ ಬಲಮೈದೆ ಶೋಯೆಂದು ಬೊಬ್ಬಿಟ್ಟು ಕವಿಯಲಾಗಿ॥
ಕೋಪದಿಂದಟ್ಟಿತ್ತು ಮುಟ್ಟಿತ್ತು ಮೆಟ್ಟಿತ್ತು।
ಭಾಪುರೇ ಸಜ್ಜುಗಿಜ್ಜುಕಿಂದು ಸೀಟಿಬ್ದೂದಜುತ್ತು।
ದೇ ಸೇಟಿಶ್ವನರ್ಥಬಲವಜಾಯೆ ಕಂಡೊಡೆಯನತಿಸರಭಸದೊಳಿದಿರಾದನು॥ ೧೨

ಒಡೆಯ ಚಿತ್ತೈಸು ನಿನ್ನಯ ಬಂಟನಿದಿರಾಗೆ।
ಖಡುಗದೊಳ್ಮಿಳಗೆ ಮಿಂಚಾರಕ್ತವಾರ್ಧಾರೆ।
ವಡೆಯೆ ಘುಡುಘುಡಿಸಿ ಹೊಡೆದಬ್ಬರಂ ಸಿಡಿಲು ತಲೆರನ್ನವೆಸನಿಂದ್ರಗೋಪಂ॥
ಕೆಡೆಯಿತ್ತು ಹರಿ ಕಾಳಮೇಘನಿಂ ಭಾಪೆಂದು।
ನುಡಿಯಿತ್ತು ಸಕಲ ಪರಿವಾರವನಿತಕ್ಕೆ ಬೆಂ।
ಬಿಡದೆ ಬಂದತ್ತು ಸಿಂಹಳನೃಪನ ಸೇನೆಯಾರ್ಭಟಿಸುತಂತಾತೋಹಿಗೆ॥ ೧೩

ಬಂದು ನಮ್ಮಯ ಸೀಮೆಯದು ಸಿಂಹಮಿಲ್ಲಿಗೇ।
ಟ್ರಂದುದಿದು ನಮ್ಮದೆಂದಾರ್ಭಟಿಸಲವರು ಭುಗಿ।
ಲೆಂದೆನುತ ಕಾಳಮೇಘಂ ಹರಿಯ ತಲೆಯನುಜಿಶಿ ಸೀಟ್ಟು ಕೆಂಗದಿರ್ವ*ಣಿಯನು॥
ತಂದೆನ್ನ ಕರದೊಳಿಟ್ಟೊಡೆಯನ ಪದಾಂಬುಜದ।
ಮುಂದಿಟ್ಟು ಬಿನ್ನವಿಪುದೀಹದನೆನುತ ಶೋ।
ಯೆಂದು ಬೊಬ್ಬಿರಿದು ಕಾದುತ್ತಿಹಂ ಕಜ್ಜವಿದು ಜೀಯ ಚಿತ್ತೈಸೆಂದನು॥ ೧೪

ಈ ರತ್ನಕಗ್ಗಳದ ರಾಸಿ ಮಣಿಯುಂಟೆಂದು।
ವಾರಿಧಿಯ ಮಧ್ಯದೊಳು ಮಲೆತನವನೆಂದೆನೆ ಮ।
ಹಾರಾಯ ಕಪ್ಪವವನಿಂ ಬಂದುದಿಲ್ಲೆಂದು ಕೂಡೆ ಕರಣಿಕರೋದಲು॥
ಭೂರಮಣನುಗ್ರದಿಂ ಗಮಿಸಲುಜ್ಜುಗಿಸೆ ಕರ।
ವಾರಿಜವ ಮುಗಿದು ಸಚಿವಂ ಜೀಯ ನಿಮ್ಮ ಪಟು।
ವೀರವಡಬಂಗಾತನಾಂಪನೇ ಪಕ್ಷಿಗೇತಕೆ ಪಾಶುಪತವೆಂದನು॥ ೧೫

ಶ್ರೀಕಲಿಗಣೇಶ್ವರಂ ಸೂಳೆ ನಿಂಬಕ್ಕ ಮಹಿ ।
ನ್ನಾಕರವೃಷಾಧಿಪಂ ಪುಸುಲೆಯಾಂಡಾರು ಸು ।
ಶ್ಲೋಕ ಭೋಗಣ್ಣರುಂ ಬಾಚರಸರೆಯ್ದೆ ಮಾರಣಮೋಹನೋಚ್ಚಾಟನಂ ॥
ಸ್ವೀಕೃತಸ್ತಂಭನಂ ಸದ್ವಶೀಕರಣಮೆಸೆ ।
ವಾಕರ್ಷಣಾದಿಷಟ್ಸಾಮರ್ಥ್ಯಮುಮನಾಪಿ ।
ನಾಕಿಗಾದೊಡೆ ನೆಗಲ್ದಿರವರಣ್ಣಂಗ ನಿನಗೆಣೆಯೆ ಧರೆಯ ನೃಪಕೀಟಕಗಳು ॥ ೧೬

ಮಂಡಲಾಧೀಶಮಣಿಮಕುಟಪದ ವೀರದೋ ।
ರ್ದಂಡನೀವರಮನೆಯ ಪೊಕ್ಕು ಸುಖಮಿರಿ ನಾನೆ ।
ದಂಡೆತ್ತಿ ಪೋಗುವೆಂ ಕರಿಹಯಪದಾತಿರಥಮುಖ್ಯಚತುರಂಗಬಲದ ॥
ಮಂಡಲದಿ ನಡೆದು ಸಿಂಹಳನೃಪನನಟ್ಟಿ ಮುಂ ।
ಕೊಂಡು ಪಿಡಿತಂದೊಪ್ಪಿಸುವೆನೆಂದುಸಿರೆ ನಂಬಿ ।
ಕೊಂಡು ರಿಪುಕುಮುದಮಾರ್ತಂಡನಹಿತೋದ್ರೇಕಷಂಡಗಿರಿವಜ್ರದಂಡ ॥ ೧೭

ರಾಯನತಿವೈಭವದೊಳರಮನೆಯ ಪುಗಲಿತ್ತ ।
ಬಾಯ ತೆಱದಿಳೆ ಘೂರ್ಮಿಸಂತೆ ನಿಸ್ಸಾಣನಿಕ ।
ರಾಯುಕೋಟಿಗಳ ಧಾಂಧಳರವಂ ಪೊಣ್ಮೆ ಮಂತ್ರಿಯ ಚಾತುರಂಗಸೇನೆ ॥
ಈಯವನಿಯುಗಲಕ್ಕೆ ಕೆದಱೆ ಸುಭಟರ ಚರಣ ।
ತೋಯಜದ ಘಾತದಿಂ ಕೆಂದೂಳಿ ಮುಸಗೆ ಕೈ ।
ಟ್ಟಾಯೆಂದು ಸಿಂಹಳಪದಾತಿ ಮುಱಿದೋಡಿ ಶರಧಿಯ ದಾಂಟೆ ಬೆಂಬತ್ತಿತೆ ॥ ೧೮

ಕೂರಂಬಿನಿಂದಂಬುನಿಧಿಯ ಪೂಟ್ಡಿದೆ ತಮಗೆ ।
ದಾರಿಯಾಗಲ್ ನಡೆದು ಭೋಯೆಂದು ಸಕಲಪರಿ ।
ವಾರವಾಮಂತ್ರಿಯ ನಿರೂಪದಿಂದಡಿಯಿಟ್ಟು ಪೊಕ್ಕು ಬೊಬ್ಬಿಱಿಯುತಿರಲು ॥
ವೈರಿಗಳ ಪೆರ್ಬಲಂ ಬಾಳೆತ್ತಿ ಪೊಣರ್ದೊ*ಡೆ ನಿ ।
ವಾರಣಂಗೆಯ್ದರಿಕ್ಸುರಕಾದಿಗಳ ಮುಱಿದು ।
ವೀರಭಟರಾಲೆ ಕಂಗೆಟ್ಟೋಡಿದವರು ಮಾರ್ಮಲೆತು ಬಂದಿದಿರಾದರು ॥ ೧೯

ಘುಡಿಘುಡಿಸಿ ಸತ್ಯೇಂದ್ರಚೋಳನ ಮಹಾಬಲಂ ।
ಕಡೆಯ ಕಾಲದ ಕಿಚ್ಚಿನಂತೆ ಯಮಭಟರಂತೆ ।
ಪೊಡವಿಯುಂ ಬಗಿದೆಟ್ದ ರಕ್ಕಸರ ಪಡೆಯಂತೆ ನಿಳಯಮೊಳು ಧರೆಯ ನೊಗೆದ ॥

ಕಡಲಂತೆ ಬಿರುಗಾಳಿಯಂತೆ ಯಕ್ಷಗ್ರಹದ ।
ಗಡಣದಂತಾಪ್ರಳಯರುದ್ರನುಗ್ರತೆಯಂತೆ ।
ಕಡಿದಿಱಿದು ಸಱ್ಱಗಿಱ್ಱನೆ ಸೀಱೀ ದಿಗ್ಬಲಿಯ ಕೊಡುತಿರ್ದುದರಿಸೇನೆಯಾ ॥ ೨೦

ಕೆಟ್ಟೋಡಿ ಕೋಂಟೆಯಂ ಪೊಕ್ಕು ಸಿಂಹಳನೃಪಂ ।
ಕಟ್ಟರಸರೊಡನೆಮಗೆ ವೈರವೇಕೆಂದು ಗುಡಿ ।
ಗಟ್ಟಿ ತನ್ಮಂತ್ರೀಶನಂ ಕಂಡು ತನ್ನ ಕುವರಿಯರಿರ್ವರಂ ಮಣಿಗಳ ॥
ಪಟ್ಟವಸ್ತ್ರಗಳ ಗಜಹಯಮುಖ್ಯವಸ್ತುಗಳ ।
ಕೊಟ್ಟೊಡನೆ ಬರಲಬ್ಧಿಯಂ ಮಥಿಸಿದಿಂದ್ರನಂ ।
ನೆಟ್ಟನಪಹಾಸ್ಯಮಂ ಮಾಳ್ಪಂತೆ ಪತಿಮೋಹಿ ತಿರುಗಿದಂ ಧರ್ಮವತಿಗೆ ॥ ೨೧

ಕ್ಷೋಣೀಶನಂ ಕಂಡು ನಮಿಸಿ ಗಜಹಯಮಣಿ ।
ಶ್ರೇಣಿವಸ್ತುಗಳನೊಪ್ಪಿಸುತೆ ಸಿಂಹಳನೃಪನ ।
ಕಾಣಿಸಿದೊಡಾಕುಮಾರಿಯರಿರ್ವರಂ ಕಾಣ್ಕೆಯಿತ್ತಾತ್ತಕುಮಾರಕರ್ಗೆ ॥
ಏಣಲೋಚನೆಯರಿರ್ವರ ವಿಭವದಿಂದೆ ಕ ।
ಲ್ಯಾಣಮಂ ಮಾಡೆಂದು ನಮಿಸೆ ಕೈಕೊಳುತಲ ।
ಕ್ಷೀಣಮಂತ್ರಿಯ ಪೊಗೞಲಾಗಿ ಕೈಮುಗಿದವಂ ಭೂಮಿಪಂಗಿಂತೆಂದನು ॥ ೨೨

ಪೋೞಮಟ್ಟೊಡೇೞ್ನೂಱು ಗಾವುದದೊಳೆಡೆವಿಡದೆ ।
ಮಿಱುಪ ಮಣಿಮಕುಟವರ್ಧನರು ಸೇವಿಸುತಿರ್ಪ ।
ರಱಿದು ಸಪ್ತದ್ವೀಪದಾಣ್ಮರಟ್ಟುವರು ಭಯದಿಂದನರ್ಘ್ಯದ ಕಾಣ್ಕೆಯ ॥
ಉಱುವ ದಿಗ್ದಂತಿಗಳ ಸೂರ್ಯನ ರಥಾಶ್ವಗಳ ।
ನಿಱಿದ ಗಣನೆಯನುಳ್ಳ ದೇಶಾಧಿಪತಿಗಳಂ ।
ಜಱಿದು ಶರಣೆನೆ ಕಾದ ನಿನ್ನ ವೀರವೆ ಮಾಡಿತಾನೇತಱವನೆಂದನು ॥ ೨೩

ದೇವ ಸಿಂಹಳನ ಸಲಹೆನಲವನ ಮನ್ನಿಸಿ ಮ ।
ಹಾವಿಭವದಿಂ ಕಮಳೆಯೆಂಬಳಂ ಪ್ರಜ್ಞರ ವಿ ।
ಭಾವಜ್ಞ ಮಿತವಚನನಪ್ಪ ಪಿರಿಯಂಗೆ ಕುಮುದಿನಿಯನವನನುಜನಪ್ಪ ॥
ಆವಿಮಳತರಮಂತ್ರಲಕ್ಷಂಗೆ ಕಲ್ಪಿಸುತ ।
ವೈವಾಹದುತ್ಸವಕೆ ನೃಪನಮಾತ್ಯನ ಕೂಡೆ ।
ಭೂವಳಯದಖಿಳದೇಶಾಧಿಪರ ಕರೆಸು ಸಾಧನತತಿಯ ಕೂಡೆಂದನು ॥ ೨೪

ಕಡುಚೆಲ್ವ ಮೇಲ್ವಲಗೆ ನೆಲಗಟ್ಟು ಗೋಡೆಗಳ।
ಗಡಣಮುಂ ಧವಳಿಸಲು ನೃಪಕೀರ್ತಿ ದಶದಿಕ್ಕಿ।
ನೆಡೆಗೆ ತೀವಿದ ತೆಱದೊಳೆಸೆಯೆ ವೈವಾಹಮಂಟಪವರರೆ! ಚತುರಂಗದ॥
ಒಡನೆ ಮಿಸುಪರಿದಳವ ಪಿಡಿದಿರ್ದ ಕಡ್ಡಿಯಿಂ।
ಕಡೆಮಾಡಿ ತೊಡೆವೆವಿದು ಚಿತ್ರವೆನೆ ಬರೆದರಿಕೆ।
ಯೊಡೆಯು ಸತ್ಯೇಂದ್ರಚೋಳನ ಪರಾಕ್ರಮದಂತೆ ಭಿತ್ತಿಯೊಳಗತಿಕುಶಲರು॥ ೨೫

ಮೇರುರೋಹಣಪರ್ವತಂಗಳಿಂತೀನೃಪಕು।
ಮಾರಕರ ಮದುವೆಯುಂ ನೋಡೆ ಚತುರತೆಯಿಂದೆ।
ಸಾರಿ ಕಂಭವ ಭಿತ್ತಿಗಳ ನೆಮ್ಮಿ ಲೋವೆಗಳ ಪತ್ತಿ ಶಿಖರಗಳನಡರ್ದು*॥
ಆರೈಯೆ ಪಲವು ರೂಪಾದಂತೆ ನಿರ್ಮಿಸಿದ।
ಕೀರಣದ ಪೊಸಪೊನ್ನ ಮಣಿಗೆಲಸದಿಂ ಮೆಱೆದು।
ದಾರತ್ನಗರ್ಭಾಧಿಪತಿಯ ಸಿರಿಯೆನೆ ಮಂತ್ರಿ ಮಾಡಿಸಿದ ಶುಭಮಂಟಪಂ॥ ೨೬

ಕೂಡಿದರು ದೇಶಾಧಿಪತಿಗಳುಱೆ ಸಿಂಗರವ।
ಮಾಡಿದರು ಪೊಟಲ ಶುಭವಾದ್ಯಂಗಳೊದಱೆ ನಲಿ।
ದಾಡಿದರು ವಾರನಾರಿಯರು ಮುತ್ತೈದೆಯರು ಪಾಡಿದರು ಶೋಭನವನು॥
ನೋಡಿದರು ಸರ್ವರಾನಂದದಿಂ ಬುಧರು ಕೊಂ।
ಡಾಡಿದರು ನೃಪನ ವಂಶಾವಳಿಯನಂತವರ್ಗೆ*।
ನೀಡಿದರು ಚಾಗಮಂ ಗಣಪರ್ವಮಂ ರಚಿಸಿ ಸೂಡಿದರು ಸತ್ಕೀರ್ತಿಯ॥ ೨೭

ಲಾಳ ನೀಂ ಬೊಕ್ಕಸದ ಮನೆಯ ಮುದ್ರೆಗೆ ನಿಲ್ಲು।
ಗೌಳ ನೀಂ ಸಂತೈಸು ಗಾಯಕರ ತಿರ್ದು ಪಾಂ।
ಚಾಳ ನೀಂ ಚಿಪ್ಪಿಗಳ ಗುರ್ಜರನೆ ಕಾದಿರ್ಪುದರಮನೆಯೊಳೊಳವಾಗಿಲಂ॥
ಜಾಳೇಂದ್ರ ಭದ್ರದುಪ್ಪರಿಗೆಯನಲಂಕರಿಸು।
ಮಾಳಿಗವನೊಂದೊಂದ ಮಾಡಿ ನೀನಖಿಳಭೂ।
ಪಾಳರಂದೈದೆ ನೇಮಿಸುತಿರ್ದನಾಮಂತ್ರಿವರ್ಯನೃಪನಾಪ್ತಕಾರ್ಯಂ॥ ೨೮

ನೀಲಕುಂತಳದ ನವಭೂಷಾರುಣಪ್ರಭೆಯ।
ಲೋಲಸೂತ್ರದ ಕನಕಪುತ್ತಳಿಯ ತೆಱದ ವರ।
ಬಾಲೆಯರು ವಿದ್ರುಮಾಧರದ ಗೋಮೇಧಾಗ್ರೆಯರು ವಜ್ರಮಾಣಿಕ್ಯದ॥

ಹೋಲುವೆಯ ದಂತಪಙ್ಕ್ತಿಯ ಪಚ್ಚಪಸಿವರೆಯ ।
ದಾಲಲಿತರತಿಯೆನಿಪ ಮೌಕ್ತಿಕಚ್ಛವಿಯೆಸೆವ ।
ಕಾಲುಗುರ್ಗದಿರ್ವೆ*ಣ್ಗಳೊಪ್ಪಿದರು ನವರತ್ನಮಾಲೆಗಳ ಸಾಂಗಿನಿಂದ ॥

ಇಂದಿನ ದಿನಂ ದೇವ ಮಂತ್ರಲಕ್ಷ್ಮಗೆ ಪಿರಿಯ ।
ಕಂದ ಮಿತವಚನರ್ಗೆ ಕನಕಮೌಕ್ತಿಕಮಣಿಗ ।
ಳಿಂದೆಸೆವ ಬಾಸಿಂಗಕಳವಟ್ಟ ಸುಮುಹೂರ್ತನಾಯ್ತೆಂದು ನೃಪತಿಲಕಗಙಹಿ ॥
ತಂದು ಕುಮುದಿನಿಯ ಕಮಲೆಯ ಸಿಂಗರಂಮಾಡಿ ।
ಹೆಂದದುತ್ಸಾಹದಿಂದಾಕುಮಾರರ್ಗೆ ಪೆಂ ।
ಪಿಂದ ಮದುವೆಯ ಮಾಡಿದಂ ಮಂತ್ರಿ ಸಜ್ಜನರು ಪರಸಿ ಸೇಸೆಯನಿಕ್ಕಲು ॥

ವೈವಾಹನಾಗವಲ್ಲಿಗಳ ಚಾತುರ್ಥಿಕ ಶು ।
ಭಾವಹಂಗಳ ಪೂರ್ಣಮಂ ಮಾಡಿ ಧನಕನಕ ।
ದೇವಾಂಬರಾದಿ ಮುಕ್ತಾಭರಣಕರ್ಪೂರವೀಟಿಕಾದಿಗಳನಿತ್ತು ॥
ಓವಿ ಸಿಂಹಳಮುಖ್ಯರಂ ತಮ್ಮತಮ್ಮ ದೇ ।
ಶಾವಳಿಗೆ ಬೀಟ್ಟೊಡಲು ದಿಗ್ವಿಸರದೊಳು ಚೋಳ ।
ಭೂವರನ ಧವಳಕೀರ್ತಿ ಪ್ರಭಾಮಯವಾಗಿ ಪರಿಕಲಿಸಿ ಮಡಲಿಱಿದುದು ॥

ಇದು ಸಕಲಭಕ್ತಪದಪಂಕೇಜರೇಣು ಮ ।
ಸ್ತದ ಮಲ್ಲಣಾರ್ಯನಾಚೇರಮಾಂಕಂಗೆ ಬೆಸ ।
ಸಿದ ಭಕ್ತಸತ್ಯೇಂದ್ರಚೋಳಕೃತಿ ಭಾವಚಿಂತಾರತ್ನವಮಳಕರ್ಣ ॥
ಹೃದಯಮಸ್ತಕವದನಸರ್ವಾಂಗಸೌಖ್ಯಕಾ ।
ಸ್ಪದವಖಿಳಸುಜನರ್ಗೆ ಪಂಚಾಕ್ಷರಿಯ ಮಹ ।
ತ್ವದ ಬೋಧೆಯೆಂದೋದಿದೊಡೆ ಕೇಳಿದರಿಗಿಷ್ಟಸಿದ್ಧಿ ಸರ್ವರಿಗಪ್ಪುದು ॥

ಐದನೆಯ ಸಂಧಿ ಮುಗಿದುದು.

## ಆಱನೆಯ ಸಂಧಿ

ಸೂಚನೆ ॥ ಶ್ರೀರಮಣಸತ್ಯೇಂದ್ರಚೋಳಧರಣೀಶನಾ ।
ಸಾರಮಹಿಮಾಕರನ ಶಿವನ ಕಾಲಂಗಳೊಳ ।
ಗಾರಾಧಿಸುತ್ತಿರಲು ರಾತ್ರಿಯ ವಿಹಾರಮಂ ಮಾಡಿದರು ಸುಕುಮಾರರು॥

ಹರನೆಂದು ದುಗ್ಧವಾರಿಧಿ ವಿಚಾರಿಸದೆ ಶಂ ।
ಕರನೆಂದು ತನ್ನ ತಿಂಗಳ ಶಿಶುವ ಕೊಡಲದಂ ।
ಹರಿವ ನೀರ್ ಮೊಱೆವ ಹಾವುರಿವ ಕಿಚ್ಚಿನ ಹೊಱೆಯೊಳಿರಿಸಲದು ಸನ್ನಿವಟ್ಟು ॥
ಶರಿರವೆಲ್ಲಂ ಕಂದಿ ಕುಂದಿತಭವಾ ನಿನ್ನ ।
ನೆರೆಯಲಿರ್ದೆನ್ನ ಮೆಯ್ಯುರಿಯಾಯಿತೆಂದೆಂಬ ।
ಗಿರಿಸುತೆಯ ಮಾತಿಂಗೆ ಮೆಚ್ಚಿ ನಲಿದಪ್ಪಿದೀಶ್ವರನೆಮ್ಮ ರಕ್ಷಿಸೊಲವಿಂ ॥　　೧

ಆರಾಯನಿಂತು ಸುಖಮಿರಲು ನಿರ್ಜರನದೀ ।
ಧಾರನಂತತಿಚಪಲನಂದದಿಂ ಮದುವೆಯಾ ।
ಗಾರದಂತಾಮುಸಲಿಯಂತೆ ವತ್ಸರದಂತೆ ಛೈತ್ರವಾಣಿಜ್ಯದಂತೆ ॥
ಪೇರಱೆಯ ತೆಱದೆ ಜಲಪುಂಜದಿಂ ಮಿಂಚಿನಿಂ ।
ಸಾರಮೊಲಿಗಿಂದೆ ನೀಲಾಂಬರದೆ ವರ್ಷಮಯ ।
ಧಾರೆಯಿಂದಿಂದ್ರಗೋಪಗಳಿಂ ಘನೋಪಲಗಳಿಂದ ಮುಂಗಾರ್ ಬಂದುದು ॥　　೨

ವಿವರಗೆಟ್ಟಿಂದುಮಿತ್ರನ ಮೇಲೆ ಪಗಲು ಸಂ ।
ಗವನೆಸಗಿ ದೋಷದೊಡನೊಂದಿದುಱಿಂದಾಳ್ದು ।
ಭುವನನಿಧಿಯಲ್ಲಿ ವಿಷಮಂ ಕುಡಿದು ಬಂದು ಕಣ್ಣೀರನೆಡೆವಿಡದೆ ಕಱೆದು ॥
ತವಕದಿಂ ಘನಘೋಷದಿಂದಲಿಲು ಪದ್ಮಿನೀ ।
ಯುವತಿಯರು ಮುಖಸುಗಿದು ಮಧುಕರಧ್ವನಿಗಳಿಂ ।
ತವೆ ಪಲುಂಬುವೊಲೆಸೆದುದಿದುವೆ ವರ್ಷಾಕಾಲವಾಹಾಹ ! ಬರದ ಶೂಲಾ ॥　　೩

ಶ್ರೀವಿಯತ್ತಳವೆಂಬ ಸೀಮೆಗಿರುಳೊಳ್ ಪಗಲು ।
ಬೇವಸದೆ ಹಾಱಿ ವರ್ಷಾಂಬುಪೂರ್ಣತ್ವವೆ ।
ತಾವಿಭಾಕರನೆಂಬ ಕರಗವಂ ಪೊತ್ತುತ್ತರಾಸೆಯಿಂ ನಡೆಯಲೊಡೆದು ॥

ತೀವಿದುದಕಂ ಸುರಿವವೊಲು ಕಱತಿಯೆ ಮಟಿಕಿಯಿಱದ ।
ಠಾವಿನರುಣಾಂಬುವೆನಿಸುವ ಸಂಜೆಗೆಂಪಿನೊಳು ।
ಸಾವನೈದಲ್ ದಿನಪನೊಳ್ ಪಗಲು ತದ್ರಾಜ್ಯವಡೆದುದೆನಿಸುವ ನಿಶಿಯೊಳು ॥

ಆರಾತ್ರಿಯೊಳು ಜಲಂಧರನ ಮುಖಶಶಿಗೆ ಮಾ ।
ರಾರಿಯಿಕ್ಕಿದ ಚಕ್ರಮೆನಲು ತೇಜಂಗುಂದಿ ।
ವಾರಿಜವಿರೋಧಿಯಾಪರಿವೇಷದಿಂದೊಪ್ಪುತಿರ್ಪ ವೇಳೆಯೊಳು ಚೋಳ ॥
ಭೂರಮಣನೊಂದಿ ಚಿಚ್ಚಂದ್ರಪ್ರಕಾಶದಿಂ ।
ದಾರೈದು ಕರದ ಲಿಂಗವನೈದೆ ಪೂಜಿಸುತ ।
ಕಾರಣಾತ್ಮಕಪುರಾತನಗಣಂಗಳನಲ್ಲಿ ಪಾಡತೊಡಗಿದನಲ್ತಿಯಿಂ ॥

ಪಿತನಳಿದೊಡನುಜಂಗೆ ಭಾಗೆಗೊಟ್ಟುಳಿದರ್ಥ ।
ತತಿಯೊಳನುಜೆಯು ಜಂಗಮಾರ್ಚನೆಯ ಮಾಡೆಂದು ।
ಸಿತಗಳನ ವಶಕಿತ್ತು ಪಡಗೇಱತಗ್ರಜಂ ಶರಧಿಯೊಳು ಮಡಿಯೆ ತಮ್ಮಂ ॥
ಅತಿಬಾಧೆಯಿಂ ಬೇಡೆ ಧನವನವರಣ್ಣನಾ ।
ಕೃತಿಯೊಳೈತಂದವನ ಭಕ್ತಿಯಾ ತರುಗೋಲೊ ।
ಳತನುರಿಪು ಸದೆದು ಬಯಲಾಗೆ ಮೆಱದಾಶಿವಪ್ರಿಯನಾಚಿಯಡಿಗೆ ಶರಣು ॥

ಹರನ ಪೂಜಾಬಲಕೆ ಕೊಂಡಾಡುತಿರೆ ಶರಣ ।
ರುರುಭವದ್ವೇಷಿಗೊಲಿದಿಷ್ಟವೇನೆನಲು ಶಂ ।
ಕರನಿಂದೆ ಶಾರ್ದೂಲಪದನಖಂಬಡೆದು ಸಂಪಗೆಯ ಮರನೇಱ ಬಳಿಕಂ ॥
ಶರಿರದ ಲಘುತ್ವಮಂ ಬೆರಲ್ಗೆ* ಕಂಗಳ ಪಡೆದು ।
ವರಿಸಿ ತಪದಬಲೆಯಂ ಜನಿಸಿದಣುಗಂಗಮೃತ ।
ಶರನಿಧಿಯನೆಱದರ್ಗೆ ತವನಿಧಿಯ ಮೆಚ್ಚಿತ್ತು ಮೆಱದ ಪುಲಿದೊಡೆಯ ಶರಣು ॥

ವೈರದೊಡೆಯರ ಮುಷ್ಟಿಹತಿಗಂಗವಿತ್ತು ಮದ ।
ನಾರಿಯೊಳಗೊಣಗುತಿರೆ ಕಾಪಿನಾಳ್ಗಳ ಕದ್ದು ।
ಸಾರಿಯಾಲದ ಮರನ ಕೊಂಬೇಱ ಧುಮ್ಮಿಕ್ಕಲಾಗಿ ಪಿಡಿದುಯ್ಯೆ ಚೋಳ ॥
ಭೂರಮಣನೀಶಂಗೆ ನೀಂ ನಿನಗೆ ತೊಟ್ಟವಂ ।
ತಾರೆಂದು ಬಾಯ ತಂಬುಲವಮಂ ಮೆಲಲ್ಕೀಯು ।
ತಾರಾಯನೊಡನೆ ಹರನೊಳು ಪೊಕ್ಕು ಮೆಱದ ಭವಭಕ್ತರಡಿಗಳಿಗೆ ಶರಣು ॥

ಭೂಲೋಲನಣುಗನಾನೆಗಳ ದಾಂಟಿಪ ಬಾಲ।
ಲೀಲೆಯುವನೀಪಟ್ಟಮುಕುಟಮುಂ ಧರಿಸಿ ನೃಪ।
ಜಾಲವಳ್ಕುತಲೋಡೆ ಕೇಳಿ ಧರೆಯುಂ ಬಿಸುಟು ಪೊನ್ನಾಂಬಲಾಧೀಶನಾ॥
ಆಲಯದೊಳಂತಥಮುವೇಷದಿಂ ರಜವುಡುಗು।
ತೋಲ್ಕೈಸಿ ಬಲಿಗೆದಱಿದಾಪ್ರಸಾದಂಗೊಳಲು।
ಶೂಲಿ ಮಱವಿಟ್ಟೊಳಗುಮಾಡಿಕೊಂಡಾ ಭಕ್ತನೈವಡಿಯನಾರ್ಗೆ ಶರಣು॥　　೯

ಹಾಳೆಯೊಳಗಣ ಶೇಷಮುಂ ಶುನಕನುಣಲ್ಕೆಯ್ದಿ।
ಕೈಲಾಸದಿಂದಿೞಿದು ಶಿವನ ಕರುಣದೆ ಸಿರಿಯು।
ಚೋಳನಾಗಿರ್ದಱಿದು ಬಂದೆಱಗೆ ತಿಳಿದು ಶಂಕರನಿಳಯಕ್ಕೈದಿ ಕರೆದು॥
ಕೇಳಭವ ಕೋಟಿಪ್ರಸಾದಿಗಂ ಭವವನಿ।
ತನವೇನೆಂಡು ಮುಖವ ತಿವಿದೊಡೆ ಹರಂ।
ತೋಳೆರಡಱಿಂದಿರ್ವರಪ್ಪಿಯೆೞಿದೆಸೆದನೈಯೀಶನಾರಡಿಗೆ ಶರಣು॥　　೧೦

ಈತೆಱದ ವರುಷಕಾಲದೊಳು ಹರ್ಮ್ಯಂಗಳೊಳು।
ಭೂತಳಾಧೀಶ್ವರಂ ಸಕಲಮಾಹೇಶ್ವರ।
ವ್ರಾತಕ್ಕೆ ದಿವ್ಯಭೋಗಂಗಳಂ ಸಲಿಸುತುಂ ತತ್ಪ್ರಸಾದಸುಖದಿಂ॥
ಶೀತಕರಧರನ ಪೂಜಾಸೌಖ್ಯದಿಂ ಘನಪು।
ರಾತನರ ವಚನಾಗಮಾರ್ಥಮುಂ ಬಿತ್ತರಿಪ।
ಗೀತಗಳ ಸೊಗಸಿನಿಂದಿರೆ ಬಂದುದಾ ಶರತ್ಕಾಲ ದಿಗ್ವಿಜಯಮೂಲ॥

ಕಾಲರಜಕಂ ಮಲಿನದಿವಸಾಂಬರವನಾವಿ।
ಶಾಲ ಸಾತಿಯು ಮಟಿಖಿಯೊಳೊಗೆದು ದಕ್ಷಂಗೀಯ।
ಲಾಲೋಕಿಸುತ್ತೈದೆ ಬೆಳಿಗಳಂ ಸಲಹಿದಳಿಯುಂಗೆ ಧವಲಾಂಬರವನು॥
ಮೂಲವೈರಂ ಪೋಗೆ ದೀವಳಿಗೆಯೊಳು ಕರೆದು।
ಮೇಲವಂ ಪೊದಿಸಿ ಪರಸುತ್ತಕ್ಷತೆಯುನಿಟ್ಟ।
ವೋಲೊಪ್ಪಿದಂ ಶರನ್ಮೇಘದೊಳ್ ಚಂದ್ರಮುಂ ತಾರಕಾನೀಕದಿಂದ॥　　೧೨

ಧಾವಲ್ಯದಂಬರವನುಟ್ಟು ಮುತ್ತಂ ತೊಟ್ಟು।
ತೀವಿ ಪುಡಿಯಲ್ಲಿ ಮಲ್ಲಿಗೆಗಳಂ ಶಾರದಾ।
ದೇವಿಯುಂ ಪೋಲ್ವಿಂದುಮುಖಿಯರಧರಾಮೃತಂಗಳ ಚಕೋರಂಗಳಂತೆ॥

ಸೇವಿಸಿ ಸುಖಂಬಡೆವ ಕುವರರಂ ನೋಡಿ ಶರ ।
ಣಾವಳಿಯ ಭಕ್ತಿಯಿಂ ಶೋಷಿಸುತ ಪಾಪಪಂ ।
ಕಾವಳಿಯನಿಂತು ಸುಖದೊಳಿರೆ ಮಹಿಪಾಲನೈತಂದುದಾಹಿಮದ ಕಾಲಂ ॥ ೧೩

ಗಂಗೆಯಂ ಪಣೆಯೊಡ್ಡಿ ಮುಂಡಾಡಿಯಾಲಿಕರ ।
ದಿಂ ಗಿರಿಜೆಯಂ ತಡವಿ ಜಲಜಭವವಾರಿಶಯ ।
ನಂ ಗೋತ್ರಭಿನ್ಮೇಘವಾಹನಾದಿಗಳ ಬರ್ಹಿರ್ಮುಖರ ಮಾಡಿ ಮಹಿಯು ॥
ಪೊಂಗಿ ತಲೆಕೆಳಗುಮಾಡಿದ ಹಿಮದ ಮರ್ಮಭಾವು ! ।
ಪಿಂಗಿಸಿದನಭವನಂತಾರಾಹು ಹಿಮಕರನ ।
ನುಂಗಲಹಿಗಳು ರಸಾತಳಕಿಟ್ಟದರೆಂದೊಡಾಹಿಮರಾಜನೇಂ ವೀರನೋ ॥ ೧೪

ಅಂಜನದ ಸಿರಿಯಂತೆ ವರ್ಷದಾಗಸಪಾಂಗಿ ।
ನಿಂ ಜಲಧಿಶಯನ ವಿಷ್ಣುವಿನಂತೆ ವನಿತೆಯರ ।
ಮಂಜುಳಪಯೋಧರಂಗಳ ಸಾರ್ವ ಬಗೆಯಲ್ಲುತ್ತ ಸೌಂದರಂಗಿಷ್ಟವಿತ್ತು ॥
ರಂಜಿಸುವ ಶಿವಲಿಂಗದರ್ಶನಸ್ಪರ್ಶನಸ ।
ಮಂಜಸದ ಧೂಪದೀಪಾದಿಕಂ ನೈವೇದ್ಯ ।
ದಿಂ ಜಂಗಮವನರ್ಚಿಸುತ್ತರಸನಿರೆ ಬಂದುದಂತಲ್ಲಿ ಶಿಶಿರಕಾಲಂ ॥ ೧೫

ಶಶಿ ಶಿರವನೇಱಿದಂ ಗಂಗೆ ತಲೆಯಡರ್ದಳಾ ।
ನೊಸಲಗ್ನಿಗಣ್ಣಿತಂಪಾದುದೆರಡಚ್ಚಿತ ।
ಣ್ಣಸದಿಂದೆ ಸಮವಾದುದೆಂದು ಮಾನವ ಹೆಸರ ಹಿಡಿಯದಗಜೆಯು ವಾಮದ ॥
ದೆಸೆಗೆ ಸಾರ್ಚಿದ ಶಿವನ ಶರಣಪ್ರಭಾವಮಯದ ।
ಬಿಸಿಲಿಂದಲುಪಚರಿಸಿ ತತ್ಕಾಲವಮಂ ಕಳೆದು ।
ವಸುಧಾಧಿಪತಿ ಸುಖದಿನಿರಲೊಂದು ದಿವಸಮಿನನಸ್ತಾದ್ರಿಯಂ ಸಾರ್ದನು ॥ ೧೬

ಅಂದೆನ್ನ ಕಣ್ ಪೋಯ್ತು ಪಲ್ಗಳುದಿರ್ದುವು ಮುಪ್ಪಿ ।
ನಿಂದೀಗ ನವೆದನಿನಿಯಳ ಪದ್ಮಿನಿಯನದೇ ।
ನೆಂದು ನಾಂ ನೋಡಿ ಚುಂಬಿಸಿ ನೆರೆವೆನೆಂದಿನಂ ನಾಣ್ಚಿ ಶರಧಿಯೊಳು ಬೀೞೆ ॥
ನೊಂದು ಹೃದಯದೊಳು ಶೋಕಂ ತುಂಬಿ ಜಿನುಗಿ ಕಾ ।
ಯ್ಪಿಂದೆ ನೀರ್ವೊಕ್ಕು ಕಮಲಿನಿ ಪಲುಂಬಲು ಜಗಂ ।
ಕಂದಿತೋ ಕರುಣದಿಂದೆಂಬಂತೆ ಪರ್ವಿ ದಟ್ಟೈಸಿದ ತಮಂಧದೊಳಗೆ ॥ ೧೭

ಭೂಮಿಯಂ ಸುರುಳ್ದು ಕದ್ದೊಯ್ದ ನರಕಾಸುರಂ ।
ಗಾಮಾಧವನ ದೆಸೆಯೊಳಾಯ್ತು ಭಂಗಂ ಸುರಪ ।
ಗಾಮುನೀಶನ ಪತ್ನಿಗಳುಪೆ ಭಾಂಡಿಕದೇಹಮಾಯಿತದಱಂ ಕಳ್ಳರು ॥
ಕಾಮಿ ಪಾದರಿಗರೇತಕ್ಕೆ ಗುಹನಂ ಪ್ರಣವ ।
ಸಾಮರ್ಥ್ಯಚೋರನಂ ಮಾನಕಂಜಾರನಂ ।
ಪ್ರೇಮದಿಂ ನೆನೆದಿಂದುಧರನ ಪೂಜೆಯ ಭಕ್ತರೆಸಗುತಿರೆ ಚಂದ್ರನೊಗೆದಂ ॥　೧೮

ಮಾಸಿದಂಬರವುಱಿದು ಧವಳಾಂಬರವನಾಂತು ।
ಲೇಸೆನಿಪ ತಾರಹಾರಂದೊಟ್ಟು ಲಾವಣ್ಯ ।
ಭಾಸುರಸಮುದ್ರಮಂ ಪೆರ್ಚಿಸುತುಮಿಂದು ನೈದಲ್ಗಳಂ ನೆಱೆ ನೋಡಲು ॥
ಆಸಮಯದೊಳು ಸೌಮ್ಯರಾಜಪುತ್ರರ್ ಮಿಗೆ ವಿ ।
ಲಾಸದಿಂ ಸಿಂಗರಿಸಿ ರಾತ್ರಿಯ ವಿಹಾರಕೆ ಮ ।
ಹಾಸಖರೊಳೆಯ್ದೆ ಪೊಱಮಟ್ಟು ಗಣಿಕಾವೀಧಿಯಲ್ಲಿ ಬರುತಿರೆ ಬರ್ದಿನಿಂ ॥　೧೯

ರತಿಯ ಕಡೆಯಲ್ಲಿ ನಲ್ಲರ್ಗೆ ಸೊಗಸೀವ ಸ ।
ನ್ಮತಮನೋರಥದ ಮದಕುಂಭಿಕುಂಭದ್ವಯೋ ।
ನ್ನತಕುಚಂಗಳ ಸಂಪದಾತಿಶಯಮೆಸೆವಾಜಿತೇಂದ್ರಿಯರ ಗೆಲ್ವೆನೆಂಬ ॥
ಅತಿವೀರದಂಗನೆಯರೆಸೆದರಾಮನ್ಮಥನ ।
ಚತುರಂಗಸೇನೆಯೆಂಬಂದದಿಂ ಚೋಳಭೂ ।
ಪತಿಯ ಸುಕುಮಾರರ್ಕೈತರ್ಪೆಡೆಯೊಳಾಸ್ಯೆ ಪುಗಱಿದು ಸಿಂಗರವ ಮೆಱೆದು ॥　೨೦

ನಡೆಯೆಂದು ಕಳುಪುತುಂ ದೀಹದಂಚೆಯನೆಮ್ಮ ।
ನಡುವಿರ್ಪುದೆಂದು ಹರಿಯಂ ತುಂಬಿಗಳ ಸಾಲ್ಗ ।
ಕೊಡುತೆ ಬಾಸೆಯ ಬಱಿಕಲಿಹೆವಕ್ಕಿಗಳನೆರ್ದೆ†ಯೊಳಪ್ಪಿಯುರಗಿಳಿಯನೆನ್ನ ।
ನುಡಿಯ ಮೀಱದಿರೆಂದು ಮೀನನಮಳ್ಗ*ಣ್ಣೊಳಳ ।
ವಡಿಸಿ ನವಿಲಂ ಮುಡಿಯೊಳಿಟ್ಟು ರತಿಯಂ ಸಂತ ।
ವಿಡುವೊಲಿನಿಯನ ಸೆಜ್ಜೆವನೆಯ ಪುಗುವೊರ್ವ ಜಾಣೆಯ ಕಂಡರಾಕುವರರು ॥　೨೧

ನಡುವೊಂದು ಪಿಡಿಯೆನಲು ಜವ್ವನದ ಸೊಕ್ಕಾನೆ ।
ಯಿಡುಕುಱಿನ ಮೊಲೆವೆಟ್ಟನೊಳು ತನ್ನತಲೆಯನಿ ।
ಟ್ಟೊಡನಳುಪೆ ಪುರುಷಸಿಂಹಂ ಮಧ್ಯದಲ್ಲಿರುತ್ತುಗುರ್ಗೊ*ನೆಗಳಿಂ ಪೊಡೆಯಲು ॥

ಸಿಡಿದೂರ್ಧ್ವಕಿಕ್ಕೈಲಕೆ ಸಾಲಿಟ್ಟ ಮೌಕ್ತಿಕದ ।
ಗಡಣವೆನೆ ರಾಗಾಧರೆಯ ಕಂಠಮಾಲೆ ಚೆ ।
ಲ್ವಡೆಯೆ ಮನ್ಮಥಯುದ್ಧಕುಜ್ಜುಗಿಸುವೊರ್ವ ಬಾಲಕಿಯೆಸೆದಳಾನೆಲೆಯೊಳು ॥ ೨೨

ಮೊಗಸಸಿಯ ಕಲೆಗಳುಱೆ ಮುತ್ತಿಬಿತ್ತಿಗಲವ ।
ನಗೆವೊಯ್ದೊಡಾದಮೃತಬಿಂಬಫಲಮಂ ಸವಿವ ।
ಬಗೆಯದಲ್ತಲ್ತಮರ್ದು*ಗೆಱೆಗೆ ಬಜ್ಜರವರಲ್ ಸೇರುವೆಯ ಮಾಣಿಕ್ಯದ ॥
ಸೊಗಸುವೇಱೆಯೊಳುಕ್ಕುವಿನಿದುಗೊಂಬಂತೆ ನಾ ।
ಲಗೆಜಂತಗಳ ಭಾಗ್ಯವೆನಿಪಧರಮಂ ಪೀರ್ವ ।
ಸುಗುಣರೆಸೆದರು ವನಿತೆಯರ ಮನೆಗಳೊಳು ರಾಜಪುತ್ರರೈತರ್ಪಾಗಳು ॥ ೨೩

ಉನ್ನತಪ್ರೌಢನಂಗನೆಗೆ ವಿತ್ತಂಗುಡದೆ ।
ಚೆನ್ನನುಡಿಗೂಟಂಗಳಿಂದೆ ಕಾಲಂ ಕಳೆವು ।
ದನ್ನೋಡಿ ಕಾಯ್ದು ದೂದವಿ ಸಂಕಟಂಗೊಂಡು ಮಗಳ ಕೂಡಿಂತೆಂದಳು ॥
ನಿನ್ನ ನೀನಱಿಯಲಾ ಕುಚಯುಗ್ಮವೆಂದೆಂಬ ।
ಹೊನ್ನ ಕರಡಿಗೆಯ ಬಿಡಬೇಡ ಮಱೆಮಾಡಿಕೊ ।
ಳ್ಳೆನ್ನಲಂತದನಱಿದು ತಳರ್ವ* ಚದುರನ ಕಂಡು ನಡೆದರಾಕುವರರ್ಕಳು ॥ ೨೪

ಹೆಣ್ಣೆ ಕೇಳಾಬರ್ಪ ಚದುರನೇ ನಿನಗೆ ಕಡೆ ।
ಗಣ್ಣ ಥಾಳಿಯನಟ್ಟದಪನೆಂದೊಡವನಳ್ಕೆ ।
ಸಣ್ಣನಡುವಿನ ಚೆಲ್ವಿನತ್ತಗಯವಂಗಿದಿರ್ನಡೆದು ಮನ್ಮಥಯುದ್ಧಕೆ ॥
ತಿಣ್ಣವೆನ್ನದೆ ನಿಂದಳೇಕೆಂದೊಡಿವಳ ತಾಯ್ ।
ಹಣ್ಣಹದುಳದೊಳಿವನ ಪಿತನೊಳಿರ್ದಪಳೆಂದು ।
ಬಣ್ಣದುಟಿಯುಬಲೆಯರು ಬಿತ್ತರಿಸೆ ನಗುತೆ ಸತ್ಯೇಂದ್ರನಣುಗರು ನಡೆದರು ॥ ೨೫

ಎರಳೆಗಣ್ಣಳೆ ಸಗ್ಗವೆಣ್ಗಳ ಶಿರೋರತ್ನೆ ।
ಪರಿಕಲಿಪ ನಱುಸುಯ್ಯ ಕಂಪನುಳ್ಳವಳೆ ಬಂ ।
ಧುರಶಿಖಿಯ ಪೋಲ್ವ ಮುಡಿಯಳೆ ಶಿಥಿಲಮಧ್ಯಳೇ ಭಾಸ್ವಚ್ಚಕೋರನಯನೇ ॥
ಉರುತರವಿಲಾಸವಿಭ್ರಮೆ ಸಕಲರಲ್ಲಿ ನಿ ।
ಷ್ಠುರವಚನದಾರಿದ್ರಸೌಖ್ಯಪರವಶೆ ನಿನ್ನ ।
ವರಿಸದನೆ ನಿರ್ಜೀವಿಯೆಂದು ನುತಿಸಿದಳಬ್ಬೆ ಸೂಚಿಸಿ ದಶಾವಸ್ಥೆಯಂ । ೨೬

ಇನಿಯನನಗಲ್ದು ವಿರಹಾಕುಲದಿ ನಾಂ ಚೆಲ್ವ ।
ಬನವ ಪುಗುತಿರಲು ಪುಯ್ಯಲ್ಚಿ ಪರಪುಟ್ಟಂಗ ।
ಳನಿತಕೆ ಬಸಂತನಾಸಹಕಾರರೂಪನಾಗಿರ್ದು ಚೆಂದಳಿರ್ಗಳೆನಿಪ ॥
ಘನಮುಪ್ಪ ಮೊಗಕಿಚ್ಚ ತಾಳಿದಂ ಮುಂಗಯ್ಯೊ ।
ಳನವರತಮಿರ್ದು ಸಾಗಿಸಿಕೊಂಬ ಗಿಳಿಗಳೆ ।
ಮ್ಮನೆ ಕಂಡು ಮೂಗ ಕಿಚ್ಚನೆ ಮಾಡಿ ತೊಂಡುಗೆಡೆದಪವೆಂದಳೊರ್ವ ವನಿತೆ ॥ ೨೭

ಕೇಳು ನೀನೆನಗೋಪ ವನಿತೆಯಂದೆನ್ನದೀ ।
ಚಾಳಿಯೇತಕ್ಕೆ ಯನುಕಂಪೆ ಮಲಯಜಗಂಧಿ ।
ಯಾಳೋಚನಂ ಬೇಡವಂಗವೆರಡಲ್ಲದಿನ್ನೊಳಗೆಯಸು ನಿನ್ನದೆಂದು ॥
ಬಾಳೆಮೀನ್ಗಣ್ಣಬಳೆ ಮುಳಿಯದಿರು ನೀನೆನು ।
ತ್ತಾಳಿಗೊಳುತುಂ ಚದುರನಂಗನೆಯ ಬುಜ್ಜವಿಸಿ ।
ಮೇಳಮುಂ ಮಾಡುತಿರೆಯಾಲಿಸುತೆ ನಸುನಗುತೆ ನಡೆದರಾಕುವರರ್ಕಳು ॥ ೨೮

ಮತ್ತವಿಟನೊರ್ವಂಗೆ ದೂತಿ ನುಡಿದಳ್ ನಿನ್ನ ।
ಚಿತ್ತದನ್ನಳ ಮಿಸುಪ ಸೊಬಗಿನೊಳ್ಗಡಲೊಳೊ ।
ಪ್ಪುತ್ತಿರ್ಪ ಚೆಲ್ವ ಮೊಗವೆಂಬ ದೀವಿಯೊಳು ನೀಂ ಬಯಸಿದೀವ್ಯವಹಾರದ ॥
ಮುತ್ತುಂಟು ವಜ್ರಮುಂಟೈ ಪವಳಮುಂಟಿಲ್ಲೈ ।
ಮತ್ತಲ್ಲಿ ನೀಂ ಗಳಿಸೆ ನೀಲಮುಂಟೀಗ ನೀಂ ।
ಪತ್ತುಸಾವಿರ ಹೊನ್ನ ಕೊಟ್ಟಾದೊಡಂ ಕೊಂಬುದುಚಿತವೆಂದಳ್ ಬರ್ದಿನಿಂ ॥ ೨೯

ಪಱಿಮೆಗಳ ಕಡುಚೆಲ್ವ ಮಱೆ ಮಿಸುಪ ತಾವರೆಯ ।
ನಱುಗಂಪಿಗೆಳಸಿ ಮೇಲಱಿಯದೊಳಪುಗಲು ನೇ ।
ಸಱ ಮುೞುಗಿ ಮುಗಿಯಲಾಂ ಪೊಱಮಡುವೊಡಿನ್ನಾವತೆಱನೆಂಬ ಮಾೞ್ಕೆಯಿಂದೆ ॥
ಮೆಱೆವೀಭುಜಂಗರಾಸಱೆಮಿಂಡಿಯರ ಕಾಂತಿ ।
ಗೆಱಗಿ ಬಿಡಲಳವಲ್ಲದೊಱಲಿ ಕಾಲ್ಗೆಟ್ಟು ಬಾ ।
ಯ್ದೆಱೆದು ದೈನ್ಯಂಬಟ್ಟು ಮಱುಗುತಿರೆ ನೋಡಿ ನೆಲದೆಱೆಯನಣುಗರು ನಡೆದರು ॥

ನಡುವೆ ಬಡತನವಾಯ್ತು ನಿನಗೆಂದು ಚುನ್ನಮುಂ ।
ನುಡಿವ ಮೊಲೆಗಳ್ಗೆ ನಡುವೆಂದುದಂದೆಲೆಲೆ ಪೊಂ ।
ಗೊಡನೆಂಬ ಬಗೆಯನಱಿದರ್ಥವಿತ್ತರ್ ಪಿಡಿದು ಕತ್ತುರಿಯ ಕೆಸಱ ಕೂಡಿ ॥

ನಿಡುಗಲ್ಲ ಹೇಱಲದು ಕೊರಲ್ಬಾ*ರವಾಗಲಿ।
ಟ್ಟೆಡೆಗೊಂಬ ನಿಮ್ಮ ಕುಂದಱಿಯಿರ್ಪೆ ಬಾಸೆಯಂ।
ಬಿಡೆವೆಂದು ಜಱಿವಿರೆಂಬಂತೆಸೆವ ನಡುವಿನಬಲೆಯರು ಕಣ್ಗೆಸೆದಿರ್ದರು॥ ೩೧

ಈತೆಱದ ಗಣಿಕೆಯರ ಕೇರಿಗಳ ಸೊಬಗಿನ ನಿ।
ಕೇತನಂಗಳ ಸಿಂಗರಂಗಳಂ ರಚಿಪ ಸು।
ಪ್ರೀತಿಗಳ ನುಡಿಗಳಂ ವಿರಹಿಗಳ ಕೂಟಗಳ ಜಾಣ್ಮೆಗಳ ಸೌಂದರ್ಯವ॥
ಭೂತಳಾಧಿಪನ ಕುವರರು ನಾಗರೀಕನೆಂ।
ಬಾತನಿಂ ಕೇಳಿಯೊಡವಂದರಂ ಕಳುಪಿ ವಿ।
ಖ್ಯಾತತರರಮನೆಯ ಪೊಕ್ಕೆಡೆಯೊಳಾಚಂದ್ರಂಗೆ ಬೀತುವು ಲಸತ್ಕಲೆಗಳು॥ ೩೨

ಪೊನ್ನ ಬೆಟ್ಟವ ಬಳಸಿದೆಂ ಸಜ್ಜನರ್ಗೊಂದು।
ಪೊನ್ನೊರೆಯನಿತ್ತುದಿಲ್ಲೇತಱರವೆಂದು ಮಿಗೆ।
ಪನ್ನತಿಕೆಯಿಂ ಪೂರ್ವಗಿರಿದುರ್ಗವಂ ಕೊಂಡು ಬಯಿಲನಾಡಂ ಸಾಧಿಸಿ॥
ದಿಙ್ನಿಚಯದೊಳು ಹಿಮಕರಂಗಳಂ ಬಿಟ್ಟೆತ್ತಿ।
ಜೊನ್ನವಕ್ಕಿಗಳೆಂಬ ವಿಬುಧರ್ಕಳಂ ತಣಿಪಿ।
ದನ್ನಾಡೆ ಜಲದುರ್ಗವಂ ಪೊಕ್ಕ ರಾಜನೆನಲಿಂದು ಪಡುಗಡಲ ಸಾರ್ದಂ॥ ೩೩

ದೇಹಕಾಂತಿಗೆ ಮುಳಿದ ತರಣಿಸತಿಯಂ ಪಿಡಿದು।
ಕಾಹನಿಟ್ಟನುಜೆ ಲಕುಮಿಯನೊಳಗೆ ತುಂಬಿ ಪಡೆ।
ಮೋಹಿಕೊಂಡಿರೆ ಮುದ್ರೆಯಿಟ್ಟ ರಾಜಂಗೆ ಕೈಸಕೆಯ ತೋಱುವೆನೆನುತ್ತೆ॥
ಆಹ ಚಕ್ರಂಗಳಂ ಜೋಡಿಸುತ್ತುಂ ರಥಾ।
ರೋಹನಾಗುತ್ತೆ ದಟಿವಂ ಕೆದಱಿ ಹುಡಿಮಾಡಿ।
ಬೇಹರಂ ಮನ್ನಿಪಂತಂಬುಜವನಲರಿಸುತುಮಿನನುದಯ ಗಿರಿಯನಡರ್ದಂ॥ ೩೪

ಇದು ಸಕಲಭಕ್ತಪದಪಂಕೇಜರೇಣು ಮ।
ಸ್ತದ ಮಲ್ಲಣಾರ್ಯನಾಚೇರಮಾಂಕಂಗೆ ಬೆಸ।
ಸಿದ ಭಕ್ತಸತ್ಯೇಂದ್ರಚೋಳಕೃತಿ ಭಾವಚಿಂತಾರತ್ನವಮಳಕರ್ಣ॥
ಹೃದಯಮಸ್ತಕವದನಸರ್ವಾಂಗಸೌಖ್ಯಕಾ।
ಸ್ಪದವಖಿಳಸುಜನರ್ಗೆ ಪಂಚಾಕ್ಷರಿಯ ಮಹ।
ತ್ವದ ಬೋಧೆಯೆಂದೋದಿದೊಡೆ ಕೇಳಿದರಿಗಿಷ್ಟಸಿದ್ಧಿ ಸರ್ವರಿಗಪ್ಪುದು॥ ೩೫

ಆಱನೆಯ ಸಂಧಿ ಮುಗಿದುದು.

## ಎಂಟನೆಯ ಸಂಧಿ.

ಸೂಚನೆ ॥ ಶ್ರೀಚೋಳರಾಯನೋಲಗಗಾಣ್ಕೆಯೆಂದು ಬಂ ।
ದಾಚಮತ್ಕೃತಿಯಶ್ವಯುಗ್ಮಮಂ ಕೊಟ್ಟೊಡಾ ।
ಲೋಚನಾಧಿಕ್ಯ ವೈಹಾಳಿಯಂ ಪೋಗಲುಜ್ಜುಗಿಸಿದರು ಸುಕುಮಾರರು ॥

ಬೆಟ್ಟಣುಗಿಯೆಡಮೆಯ್ಯನಡಸಿರಲ್ ನೀರ್ವೆಣ್ಣು ।
ನಟ್ಟನಡುದಲೆಯೊಳಿರೆ ಮೀನೆಱಿಯನೆಲರುಣಿಗ ।
ಳಿಟ್ಟ ತೊಡವುಗಳಾಗೆ ದುರ್ಧರಪಶುಪ ನೋಡುತಿರಲು ಬಲದೊಡೆಯನೇಱ ॥
ಬಟ್ಟಲೊಳ್ ಪಾಲ್ತಂದ ಪಸುಳೆವೆಣ್ಗೊಲಿದೆರ್ದೆ*ಯ ।
ಕೊಟ್ಟಿಸೆವನೆಂದು ನಿನ್ನಂ ಶರಣರೊಳಗೆ ದೂ ।
ಱಟ್ಟೊಡೇಗೆಯ್ವೆ ಶಿವ ಪೆರ್ಮೆಗಿಡದಿರ್ಪುದಳವಟ್ಟೆನ್ನ ಹೃದಯದೊಳಗೆ ॥ ೧

ಆಗಳಾಕುವರರಧಿಕಸ್ನಾನಮಂ ಮನೋ ।
ರಾಗದಿಂ ಮಾಡಿ ಚೆಲ್ವಿಂದೆಸೆವ ಶತದಳದ ।
ಪೂಗಳಿಂ ಷಡ್ವಿಧಾನದೊಳೆ ಲಿಂಗಾರ್ಚನೆಯನೆಸಗಿ ಪರಿಮಳಚೂರ್ಣದ ॥
ಯೋಗಮಿಶ್ರದೆ ತತ್ಪ್ರಸಾದತಾಂಬೂಲಕರ ।
ರಾಗುವನಿತಕ್ಕರಸನೆಯ್ದೆ ಪೊಱಮಟ್ಟನೆನೆ ।
ಕೈಗೊಟ್ಟು ಕೆಲಬಲದೊಳೋಲೈಸೆ ಬರೆ ನಡೆದನಲ್ಲಿ ಚೋಳಾಧೀಶನು ॥ ೨

ವೈರಿಧರಣೀಪಾಲಸಂದೋಹವೆಂಬ ಕಂ ।
ಠೀರವಕೆ ಶರಭ ಮಝುಭಾಪು! ಮೇಲುಪ್ಪರ ಮ ।
ಹಾರಾಯ ರಾಯಪರಮೇಶ ಜಯಜೀಯಯೆಂದುಲಿಯೆ ಕಂಚುಕಿಗಳಲ್ಲಿ ॥
ಭೂರಮಣಸತ್ಯೇಂದ್ರಚೋಳನಾಸಿಂಹಾಸ ।
ನಾರೂಢನಾದನಂದಷ್ಟ ಸಂಪದದ ಕಾ ।
ಱಿಯಿಂ ಪಡೆದನೋಲಗವನಾಂ ಬಣ್ಣಿಸುವೊಡಳವೆ ಬಲ್ಲಂತೊಱೆವೆನು ॥ ೩

ಸಾರಮಂತ್ರೀಶರಿಂ ಕಾರಣಪ್ರಾಜ್ಞರಿಂ ।
ವೀರಭಟರೊಗ್ಗಿನಿಂ ಪ್ರೇರಕಾಧೀಶರಿಂ ।
ಛಾರರಿಂ ಮಣಿಮಕುಟಧಾರರಿಂ ಸುರವೃಕ್ಷಧೋರಣಿಧುದಾರಗುಣರಿಂ ॥

ಧೀರನರಮುಖ್ಯರಿಂ ಮಾರತಂತ್ರಂಗಳ ವಿ ।
ಚಾರದ ಭುಜಂಗರಿಂದಾರಯ್ಯದೀಮರ್ತ್ಯ ।
ವಾರಸಾತಳಸಭಾಕಾರನಾದಂತೆಸೆದುದಾರಾಯನೊಡ್ಡೋಲಗಂ ॥ ೪

ಪರಮ ಮೈತ್ರೇಯರಿಂ ಪುಂಡರೀಕಾಕ್ಷಿಯರ ।
ತರದಿಂದೆ ಸೂತರಿಂ ಮತ್ತೆ ತತ್ಕ್ರತುಕರ್ತೃ ।
ಪುರುಷರಿಂ ತಟ್ಟಲಗುಗಳ ಮರೀಚಿಗಳಿಂದಲೆಸೆವ ಸಂಗರದಕ್ಷರಿಂ ॥
ಮರಳಿ ನಿರ್ಜರಗುರುವ ಪೋಲ್ವ ವಿಬುಧರ್ಕಳಿಂ ।
ವರಮುನಿಯ ಸಭೆಯಂತೆ ತದ್ಬ್ರಹ್ಮಸಭೆಯಂತೆ ।
ಸುರಪತಿಯ ಸಭೆಯಂತೆ ಮೆಱೆದುದಾರಾಯನೊಡ್ಡೋಲಗಂ ಸೈಪಿನಿಂದೆ ॥ ೫

ಮಱೆಯದಿರು ಜೀಯ ಪಂಚಾಕ್ಷರಿಯ ಪಾಠಮಂ ।
ಮಱೆಯದಿರು ಮುರುಗರಿಷ್ಟವನಿತ್ತ ಕೂರ್ತುದಂ ।
ಮಱೆಯದಿರು ಭಯಮುಮಂ ತೀರ್ಚಿಯುಪಮನ್ಯುವಂ ಶಿವನಸಾರ್ಚಿದಮಂತ್ರಮಂ
ಮಱೆಯ ಬೇಡಯ್ಯ ಪಿಳ್ಳೆಯನಾರ ಮಹಿಮೆಯಂ ।
ಮಱೆಯದೆ ನಮಶ್ಶಿವಾ ಎಂಬುದೆಂದೆನುತಲೆ ।
ಚ್ಚಱಿಸಿ ಭಸಿತದ ಪುಟ್ಟಿಗೋಲಗ್ಗಳಿಂದಡಿಗಡಿಗೆ ತಿವಿವರಿರ್ವರು ಚೋಳನ ॥ ೬

ಪರುಷದಂತಾವೇದದಳತೆಗೋಲಂತೆ ನಿ ।
ರ್ಜರಧೇನುವಂತೆ ಪತಿಭಕ್ತಿಯಂತಮೃತಸಾ ।
ಗರದಂತೆ ಮುಟ್ಟಲೊಡನಾಸುವರ್ಣತ್ವದಿಂ ಶ್ರುತಿಕಾಷ್ಠಜೀವಾಳದಿಂ ॥
ಸೊರೆವಾತಿನಿಂ ಕಟ್ಟ ಬಾರಿಸಿದೊಳ್ಳುಡಿಯ ।
ಪುರುಷನೊಳ್ ನುಡಿವ ದಾರದ ತೆಱದಿ ರಂಜಿಸುವ ।
ಕರಮಾಪ್ರವಾಳದಿಂದೆಸೆವ ದಂಡಿಗವಿಡಿದು ಜಾಣಗಾಣಂ ಪಾಡಿದಂ ॥ ೭

ಪಾಲ್ಗಡಲ ಚೆಲ್ವ ಬಂಬಲ್ದೆರೆಯನೀಟಿಸ್ಕೊಂಡು ।
ನಲ್ಗೆಯ್ದು ತವರಾಜದೊಡವೆರಸಿದಿನಿದದೇಂ ।
ಸಾಲ್ಗೆ ಜೇನೆಯ್ಯ ಕಂದಲ್ ಸೊಗಸು ಸಾಟಿಯೇ ಸಗ್ಗಿಗರ ಪೊಂಗೊಡನೊಳು ॥
ಮೇಲ್ಮುಗ್ಗಕ್ಕುವಮರ್ದೆ*ಣೆಯೆ ಪೂರ್ವದಃಪೂತಿಯರ ।
ಕಾಲ್ಗೆಱಗಿ ಪಡೆದನೋ ಭಾಪುಭಾಪೆಂದು ಪೊಗ ।
ಟಲ್ಗರುವ ಗಾಣನಂತಾರಾಜಸಭೆ ಲೆಪ್ಪದೊಲ್ ಗಾಡಿವೆತ್ತಿರ್ದುದು ॥ ೮

ರವಿವಂಶರತ್ನಮಯುದಗೆಗಳೋ ನಾಡೆಯೊ।
ಪ್ಪುವ ರೋಹಣಾದ್ರಿಗಳ ಗಂಡಶೈಲಂಗಳಿಂ।
ದಿವರ ಮಸ್ತಕದೆಡೆಗೆ ಬಂದ ಮಣಿಪುಂಜಗಳೊ ಪೆರ್ಚುಕುಂದಿನ ಶರಧಿಯ॥
ನವರತ್ನರಾಶಿಗಳು ಗಾಂಭೀರ್ಯನಿಧಿ ಚೋಳ।
ಭುವನಾಧಿಪನ ಸಭೆಯು ಸಾರ್ದುವೋ ಪೇಟಿವೆಂ।
ಬವೊಲಿರ್ಪ ಮಣಿಮಕುಟವರ್ಧನರಸಂಖ್ಯಾತರಿರ್ದರೊಡ್ಡೋಲಗದೊಳು॥　　೯

ಗಾಯಕರು ಪಾಡಿದರು ನೋಡಲಾವಾಗ್ಮಿಗಳು।
ಬಾಯ ತೆಱದಾಡೆ ಶಿಕ್ಷಿಪೆವವರ ಕೂಡೆ ಮ।
ತ್ತೀಯವನಿಪರು ಕಪ್ಪಮಂ ತಂದು ಮುಂದಿಟ್ಟು ಬಿನ್ನವಿಸಿಯುಟ್ಟಿವಟ್ಟು॥
ರಾಯನಂ ನಿರಘನಿರ್ಮಾಯನಂ ನೈರ್ಮಲ್ಯ।
ಕಾಯನಂ ಸಂತತಾಜೇಯನಂ ನಿರ್ಜಿತಾ।
ಪಾಯನಂ ಕಾಣ್ಬುದೋಹೋಯೆನುತ್ತಿರ್ದರು ನ್ಯಾಯದಿಂ ದಂಡಧರರು॥　　೧೦

ಆರಾಯನಿಂತು ವೈಭವದಿಂದಲೋಲಗದ।
ಸಾರಸುಖದಿಂದೊಪ್ಪುತಿರೆ ಸಿಂಧುದೇಶದ ಮ।
ಹೀರಮಣನಖಿಳಸಂಪತ್ತಿನಿಂ ನಡೆತಂದು ಗಜಮಸ್ತಕದಿನಿಟಿಯುತೆ॥
ತೋರಮುತ್ತುಗಳ ರನ್ನಗಳನಂಜುಳಿಗೆದಱ।
ಸೇರಿ ಸಾಷ್ಟಾಂಗದಿಂ ನಮಿಸಿ ನಿಂದಿನಕುಲಮ।
ನೋರಥಸಹಾಯಂಗಳಪ್ಪ ತೇಜಿಯನೆರಡ ತಂದು ಕಾಣ್ಕೆಯನಿತ್ತನು॥　　೧೧

ದುರ್ವಾಸಮುನಿಶಾಪದಿಂದಂದು ಪೋದ ಸುರ।
ರರ್ಥಮಂ ಬೇಡಿ ಮಥಿಯಿಸಿದೊಡಂ ತತ್ಸಿಂಧು।
ಪೂರ್ವಾಮರಾಮರರ ಬಲ್ಪಾವ ಪಿಡಿಸುತುಚ್ಚೈಶ್ಶ್ರವನೆನಿಪ್ಪ ಹಯವ॥
ಸರ್ವಬಾಧೆಯೊಳಿತ್ತನಂತಲ್ತು ನಿಜಹರ್ಷ।
ದುರ್ವಿನಿಂದೀಸಿಂಧುನೃಪನೆರಡು ಕುದುರೆಗಳಿ।
ನುರ್ವರಾಧಿಪಗೀಯಲರರೆ! ಭಾಪೆಂದೆನುತ ಸರ್ವರಾನಂದಿಸಿದರು॥　　೧೨

ಆನೆರೆದ ಸಭೆಯು ಬೀಟಿಕ್ಕೊಟ್ಟಿಣುಗರಿರ್ವರ್ಗೆ।
ಯಾನೆರಡು ಕುದುರೆಗಳ ಕೊಡುವೆನೆಂದಿತ್ತರಸ।
ನಾನೇಹದಿಂ ಸಿಂಧುನೃಪನ ಕಳುಹಿದೊಡಾತನಾನೆಗಳಿಗಧಿಕನಪ್ಪ॥

ಆನೆಯು ಶಿರಸ್ಥಲವ ಸಿಂಧುಭೂಮಿಪನಡರ್ದು* ।
ತಾನೆಯ್ದಿ ಪುಗಲು ಜೆಲ್ವಿನ ಸೌಖ್ಯಮಂದಿರವ ।
ನಾನೆಗಟ್ಟಿ* ಸಿಂಧುವಂ ಪೊಕ್ಕನಿನನನ್ಯೋನ್ಯದಾನೇರ್ಪಿನೊಲ್ಮೆಯಿಂದ ॥ ೧೩

ಪಗಲು ಕಡೆಗಾಣೆ ತವುವೆಂಬ ಗಿಡುಗಂಗಳ್ಗೆ ।
ಖಗದ ಮಱಿಗಳು ಬಿಗುರ್ತೋಡಿ ಮನೆಮನೆಯ ಗೂ ।
ಡುಗಳ ಪೊಕ್ಕಿದೆ ದಿಗಿಲನುರಿಯುಲಂತ್ಯದ ಗುಣವ ಸಾಱುತಪ್ಪೃಶ್ಯಮಾಗಿ ॥
ಮೊಗವೆಯ್ದೆ ಹೊತ್ತಿ ಹೊಗೆವಂತುರಿಯುತಿರ್ಪ ದೀ ।
ಪಗಳ ಸಂತೈಸಲೈತಂದಂದದಿಂ ಪೂರ್ವ ।
ನಗದಗ್ರದೊಳಗುದಯವಾದನಾತರಣಿ ಕಣ್ಬಾಲ್ಗೆ ಹರವರಿಯ ಸರಣಿ ॥ ೧೪

ಲೋಕಬಾಂಧವನುದಯವಾಗಲುಪ್ಪವಡಿಸುತ ।
ಲಾಕುಮಾರರು ನಿತ್ಯಕೃತ್ಯಂಗಳಂ ರಚಿಸಿ ।
ಭೂಕಾಂತನಿತ್ತ ಭಾಸ್ವತ್ತುರಂಗದ್ವಯಗಳಂ ತನ್ನಿಶಾಂತದಲ್ಲಿ ॥
ಜೋಕೆಯಿಂದಿರ್ದವಂ ತರಿಸೆ ರಥ್ಯಸ್ಥಲಕ ।
ನೇಕ ಮನ್ನೆಯ ಮಕುಟವರ್ಧನರು ಸಹಿತಮಾ ।
ಲೋಕನಂಗೆಯ್ದಿರಾನಂದದಿಂ ನಲಿದು ಕೊಂಡಾಡಿ ಹರ್ಷವನೆ ಸೂಡಿ ॥ ೧೫

ಜಾಣರೆನಿಸುವ ಕುವರರಾವಾಜಿಶಾಸ್ತ್ರಪ್ರ ।
ವೀಣರಂ ಕರೆದಿವಂ ಪರಿಕಿಸುವುದೆನೆ ಜೀಯ ।
ಕಾಣೆವೀಧರೆಯೊಳಿಂತಪ್ಪ ಸೌಖ್ಯಗಳನಿಂತಿವಱ ಹೃತ್ಕಮಲದೊಳಗೆ ॥
ಮೇಣು ಸಿರಿ ಸತ್ಯಂಗಳೊಳವು ಮನವದಱಿನಿಂ ।
ದೇಣಂಗೆ ಮಾರುತಂಗತಿವೇಗ ಪಂಚಕ ।
ಲ್ಯಾಣವಿದೆ ದೇವಮಣಿ ದೊರೆ ಸುಟೀಗಳಿವೆಯೀಸುಲಕ್ಷಣವನಱಿವರಾರು ॥ ೧೬

ಎಂದ ಮಾತಂ ಕೇಳುತಾಮಂತ್ರಲಕ್ಷನಾ ।
ನಂದದೆ ಮನೋಜವಾರಣಸೌಮ್ಯಗಮನೆ ನೇ ।
ಹಂದಳೆದು ಮೇಲ್ವರಿದು ಬರೆ ತುಡುಂಕುವ ಬರ್ದಿನಿನಿಯನ ವಿಲಾಸದಂತೆ ॥
ಮುಂದುವರಿವಾತವಕದಿಂದೆ ಮಿತವಚನನೊಡ ।
ನೆಂದನಣ್ಣಯ್ಯ ಕೇಳಿರ್ವರಿವನಡರಿಯಾ ।
ಳಿಂದು ವೈಹಾಳಿಯಂ ಮಾಡವೇಟಿಕ್ಕಂದು ಕಿಱುನಗೆ ಮೊಗದೊಳೆಸೆಯೆ ನುಡಿದಂ ॥ ೧೭

ಆನುಡಿಯು ಕೇಳ್ದು ವಿತವಚನನೆಂದಂ ತಮ್ಮ ।
ನೀನಱಿಯಲಾ ಮುಂದಣಾಗುಹೋಗಂ ತಂದೆ ।
ಯೇನುಟಿದ ನೃಪರಂತೆ ನಾರಿಸುತಮೋಹಿಯೇ ಸಕಲಸೌಭಾಗ್ಯವಿರಲು ॥
ಜ್ಞಾನಿ ಶಂಕರಭಕ್ತವರ್ಗಕೆವಿಮ್ಮಂದೆ ನೋ ।
ವೇನಾನುಮಾದೊಡಾತ್ಮಜರೆಂದು ಮನ್ನಿಸುವ ।
ನೇ ನವ್ಯಘೋಟಕಂಗಳನೆಮ್ಮ ತೊಡೆಮಡಂಗಳ್ಗೆ ತಿರ್ದಿಸಲೆ ವೇಟ್ಟುಂ ॥　　೧೮

ಕೋರಿವೆಣ್ಣಿಂ ಕುವರನಂ ರನ್ನಮಂ ಕೃಷಿಯು ।
ವಾರುವಂಗಳ ನವ್ಯಕೂಟದೊಳು ಬಾಲ್ಯದೊಳು ।
ಚಾರುಸುಪ್ರಭೆ ಮುಸುಳಿಸಿಪ್ಪೆಡೆಯೊಳ್ಳೆದೆ ತತ್ಕಾಲದೊಳೆ ಪಲ್ಲಣಿಸುತ ॥
ಭೂರಮಣನಡರಲಂತಾಸ್ಪರ್ಶಕೋಪಶಾ ।
ಣಾರಚಿತಕರ್ತೃದರ್ಶನಶಿಕ್ಷೆಗಳನುಜಿ ವಿ ।
ಚಾರದಿಂದೊಳಗು ಮಾಡಲ್ಬೇಹುದೆನಲಣ್ಣನೊಳೆ ಮಂತ್ರಲಕ್ಷನೆಂದಂ ॥　　೧೯

ನಱುಗಂಪನೆಣ್ದೆಸೆಗೆ ಬೀಱುವಲರ್ವಂ*ಡುಣ್ಬ ।
ಪಱಿಮೆಗಳಿಗೇಂ ವಿಚಾರಮೆಯುಮುರ್ದು* ಮಾಂಬಣ್ಣಿ ।
ಗೆಱಗಿ ಸೋರ್ವಿನಿದುಮಂ ಪೀರ್ವಲ್ಲಿ ಕೀರಂಗೆ ಬೆಜ್ಜರೋದಿನ ಮಾಲೆಯೆ ॥
ಸಱಿವಿಂಡಿ ಸೆಜ್ಜೆವನೆಯಿನಿಯನಾಲಿಂಗನಕೆ ।
ನಿಱಿ ಸೋಂಕಲಿದಿರಾಗೆ ಬೇಡುವಜ್ಜರ ಬೋಧೆ ।
ಯಱಿವುದೇ ಕೇಳಣ್ಣ ತಂದೆಯೇಗೆಯ್ವನಟ್ಟಿಯು ಕಿಡಿಸದೇಟಿಂದನು ॥　　೨೦

ಎಲೆ ತಮ್ಮ ಕೇಳು ಧರ್ಮಜನುದಕಮಂ ಗಗನ ।
ದುಲುಹಿಂಗೆ ಬಿಟ್ಟನುಜರಂ ಪಡೆದನದುಬೇಡ ।
ಮಲುಹಣನಗಲ್ದವಸ್ಥೆಯೊಳೆಯ್ದಲಾಭೀರು ಮಲುಹಣಿಯ ನುಡಿಯ ಕೇಳಿ ॥
ಮಲಹರಸ್ತೋತ್ರದಿಂ ಕೈಲಾಸಮಂ ಪುಗನೆ ।
ಸಲೆ ಸೌಖ್ಯರೂಪ ಕೇಳ್ ನೀನು ಧೈರ್ಯಂಗಿಡದೆ ।
ನಿಲೆ ಸೈರಿಸೆನಲಯ್ಯ ಮುನಿವನಲ್ಲೆನೆ ಮಂತ್ರಲಕ್ಷಗಗ್ರಜನೆಂದನು ॥　　೨೧

ಪಿತನ ಕಾಲ್ದರಿಯನೇ ಚಂಡೇಶ್ವರಂ ತನ್ನ ।
ಸತಿಯ ಪೊಡೆಯುಂ ಸೀಟನೇ ಚೋಳನಂಗನೆಯು ।
ನತಿಕೋಪದಿಂ ಕೈಗಳರಿಯನೇ ಕಲಿಕಂಬನಯ್ಯನ ಕೊರಲ್ ಪಱಿಯನೆ ॥

ನುತಿಗೊಲ್ಲಳಾನಿಂಬಿ ಮಗನ ತಲೆಯೊಡೆಯಳೇ ।
ಸಿತಕಿರಣಜೂಟನಸಿತಗ್ರೀವನಭಯಕರ ।
ಯುತಜಗತ್ಸುಕ್ಷ್ಮಿಹರಿನೇತ್ರಾಂಘ್ರಿಯಭವನಣುಗರ್ಗಂಟಿ ತನ್ನವರ್ಗ*ಳು ॥ ೬೨

ಅದು ಕಾರಣಂ ವಿಚಾರಂ ಬೇಹುದೆನಲಣ್ಣ ।
ಯಿದಱಿಕೊಳೇಂ ಸಂದೇಹಮೇ ಶಿವಂ ಯಕ್ಷರೂ ।
ಷದಿನಿಟ್ಟ ಹುಲ್ಲನಜಹರಿಸುರಪ್ರಮುಖರೇಂ ತಮ್ಮ ಯುಕ್ತಿಯ ಬಲ್ಮೆಯಿಂ ॥
ಅದನ್ನೆದೆ ತೊಲಗಿಸಿದುದಿಲ್ಲವಾವ್ಯಾಘ್ರಚ ।
ರ್ಮದ ವಿಯದ್ಗಂಗಾಧರಂ ಯಮಧ್ವಂಸಿ ಮಾ ।
ಡಿದ ಬಾಧೆ ತತ್ಪ್ರೀತಿಯಲ್ತೆ ತಾಪತ್ರಯಂ ಪೊರ್ದದೆಂತುಂ ಭಕ್ತರಂ ॥ ೬೩

ವರಮಲ್ಲಿಕಾಸ್ಮೇರಫಲ್ಗುನೇಷ್ಟದ ಭವೋ ।
ತ್ಕರವೈದ್ಯ ವಿಶ್ವತಶ್ಚಕ್ಷು ರೂಪಂಗೆ ಬಂ ।
ಧುರಸುಕೇಶಿಪ್ರಣುತರಾಜಧರವಿಶ್ವಪತಿಯಣುಗರ್ಗೆ ಸಹಜಲಿಂಗ ॥
ಚಿರವಿಶ್ವತೋಮುಖಸಖರ್ಗೆಯಾರಾಧ್ಯರ್ಗೆ ।
ನಿರುಪಮಿತದಣ್ಣಾಯಕರ್ಗೆ ಚಿಕ್ಕಯ್ಯಂಗೆ ।
ಹರನ ಮಹಿಮೆಯ ಕಾರ್ಯವೆಂದರೆಂದಾಚಿಕ್ಕದಣ್ಣಾಯಕಾರಾಧ್ಯರು ॥ ೬೪

ಎಂದು ನಿಶ್ಚೈಸಿ ಕೇಳಣ್ಣ ವೈಹಾಳಿ ಬೇ ।
ಡೆಂದೊಡಾಂ ನಿಲ್ಲೆಂ ಭವಿಷ್ಯತ್ಪದಂಗಳಾ ।
ವಂದಂಗಳಪ್ಪವೆಂಬುದನಱಿಯಬಾರದಾಕಂದರ್ಪಹರನೆ ಬಲ್ಲಂ ॥
ಇಂದು ನಿನ್ನಿಂದಾದ ತಪ್ಪೆನ್ನದಾಯ್ತು ಕೇಳ್ ।
ಸಂದೆಗಂ ಬೇಡವೇಱಿಂದೊಡಂಬಡಿಸಿರ್ಪ ।
ರೊಂದು ಚಿತ್ತದೊಳೆ ಗಂಭೀರಭೇರಿಗಳೊದಱಲೆಂದಲ್ಲಿ ನಿರವಿಸಿದರು ॥ ೬೫

ಇದು ಸಕಲಭಕ್ತಪದಪಂಕೇಜರೇಣುವು ।
ಸ್ತದ ಮಲ್ಲಣಾರ್ಯನಾಚೇರಮಾಂಕಂಗೆ ಬೆಸ ।
ಸಿದ ಭಕ್ತಸತ್ಯೇಂದ್ರಚೋಳಕೃತಿ ಭಾವಚಿಂತಾರತ್ನವನುಳಕರ್ಣ ॥
ಹೃದಯಮಸ್ತಕವದನಸರ್ವಾಂಗಸೌಖ್ಯಕಾ ।
ಸ್ಪದಮಖಿಳಸುಜನರ್ಗೆ ಪಂಚಾಕ್ಷರಿಯ ಮಹ ।
ತ್ವದ ಬೋಧೆಯೆಂದೋದಿದೊಡೆ ಕೇಳಿದರಿಗಿಷ್ಟಸಿದ್ಧಿ ಸರ್ವರಿಗಪ್ಪುದು ॥ ೬೬

ಏಟನೆಯ ಸಂಧಿ ಮುಗಿದುದು.

## ಎಂಟನೆಯ ಸಂಧಿ

ಸೂಚನೆ ॥ ಚೋಳಕೆಯಿಂ ವೈಹಾಳಿಪೋಗಿ ಕುವರರು ತಿರುಗ।
ಲಾಕಾಲದಲ್ಲಿ ಮಿತವಚನನಶ್ವದ ಖುರದಿ।
ಶ್ರೀಕಂಠವರಿಕಂಠವೆನಲು ಶಂಕರನಟಿದುದಂ ಕೇಳಿದಂ ಚೋಳನು ॥

ಚರಣಕ್ಕೆ ಸುತನೆಱಗೆ ಶಿಖಿಗೆ ಹಸ್ತಶ್ರವಣ।
ದುರಗತತಿ ತಲೆಯೆತ್ತೆ ಶೂಲದೆರೆವೆಣಗಂಗ।
ಳೆರಡಹಿಫಣಾಮಣಿಗಳೊಳು ಗಂಗೆಯೊಳಗಲ್ಲಿ ಫಣಿದೃಷ್ಟಿಗಳ್ ಬಿಂಬಿಸೆ॥
ಕರಪದನಖಂಗಳೊಳಗಹಿಗುಹಾಕ್ಷಿಗಳೆಸೆಯೆ।
ಶಿರದಿ ಹತ್ತಂಗುರದ ಕೈಯಲ್ಲಿ ಹತ್ತಸಾ।
ಸಿರವಂಘ್ರಿಗಳೊಳೆ ನೂಱಪ್ಪತ್ತು ಕಣ್ ಪೊಳೆಯಲೆಸೆವ ಗಂಗಾಧರ ಜಯ ॥ ೧

ಆಸಮಯದೊಳು ಕಾಳಹಸ್ತಿ ಬಟೀಕಾ ವಾರ।
ಣಾಸಿಮಯವೆನಿಸುವಾನೆಯ ಪೌಜಿನಿಂ ಪರ್ವ।
ತಾಸಮೀಚೀನಧಾನುಷ್ಕೋಟಿರೌದ್ರ ಪಾದಾತಿಬಲದೇಟಿಕ್ಕೆಯಿಂದ ॥
ಭಾಸುರದ ಚಕ್ರಗಂಧರ್ವರಣುಗರ ವರವಿ।
ಲಾಸದಾರಥಹಯಂಗಳ ಚಾತುರಂಗಬಲ।
ವೀಶಭಕ್ತರ ಪೆಂಪಿನಿಂ ಭಾಪು! ಕೂಡಿತ್ತು ಭೂಮಿ ಬೆಸಲಾದಂದದಿಂ ॥ ೨

ತಡಿಯೆಂಬ ಕರೆಯಿಂದಲೆನೆದೆರೆಗಳಿಂದಲು।
ಗ್ಗಡದ ಝುಲ್ಲರಿಫೇನದಿಂದಲುರಗೆಜ್ಜೆಕಾ।
ಲ್ಗಡಗ ಬೊಬ್ಬುಳಿಕೆ ನೊರಹುಗಳಿಂದಲಲಗುಮೀನಿಂದೆ ಹಲ್ಲಣೆವೆನಿಸ್ಪ ॥
ಹಡಗಿನಿಂ ಕಿರಣಗಳ ನವರತ್ನದೇಟಿಕ್ಕೆಯಿಂ।
ಕಡಲೆಂಬ ಸಂಜೋಗದವುಳಸೈಂಧವಗಳಂ।
ಪಿಡಿದರಿಕ್ಕೆಲದಲ್ಲಿ ಸಾಣಿಗಳು ಸಿಂಗರಿಸಿ ಪೊಱಮಟ್ಟರಾಕುವರರು ॥ ೩

ನುಣ್ಣುಗುರುಗಳ ಪೊಸವರೆಯದಂಬುಜಾಸ್ಯದ ಸೂಳೆ।
ವೆಣ್ಗಳೊಡನೈದಲುಜುಣ್ಗಿಸೆ ಪಡೆ ನೋಹರಿಪ।
ಚಾಣೆಗ ಸಂತೋಷಿಸುತ ವಂದಿಗಳು ಜಯ ಜೀಯ ಭಳರೆ ಭಾಪೆಂದುಲಿಯಲು ॥

ನಾಣ್ಗಾಗ್ದೆಯುಲ್ತು ಕಪ್ಪುರವರಲ ಸೇಸೆಗಳ ।
ತಣ್ಗಂಪಿನಿಂ ಹರಿಗಳಂ ಕುವರರೆಯ್ದಿ ವೇ ।
ಗಣ್ಗೆ ಭೋಂಕೆನಲಡರಿ ಬಿದಿಯನಲರ್ವೊ*ಡೆಯ ಮೆಯ್ಗಣ್ಗರುವರಂ ಜಱಿದರು ॥ ೪

ಕಂಗಳಸಿಗಳ್ ಮೀಂಗಳಾ ಕುಚರಥಂಗಳು ।
ತ್ತುಂಗಭೈತ್ರಗಳು ಭೂಪನ ಬೊಬ್ಬೆಯುಬ್ಬರರ ।
ವಂಗಳು ನಿತಂಬಗಜಗಳು ಗಿರಿಗಳಾಗುವತಿಹಸನಹಯಗಳು ತೆರೆಗಳು ॥
ಪೆಂಗಳಿಟ್ಟಹ ಬಟ್ಟದುಱುಬು ಪರಿಗೆಗಳು ಕವು ।
ಠಂಗಳಾಶೃಂಗಾರ ವೀರರಸ ವಾರ್ಧಿಗಳ ।
ಪಾಂಗು ಬೆರೆದಂದದಿಂದೈದಿದರು ಕುವರರೊಡನಂಗನೆಯರತಿಸುಭಟರು ॥ ೫

ಅಂದೆನ್ನ ಸುತ ಭೀಮನಂ ಮುಳಿದು ಬಿಲ್ಗೊಪ್ಪಿ ।
ನಿಂದಿಱಿದ ಕರ್ಣನಯ್ಯನನಿಂದು ಕಾದಬೇ ।
ಕೆಂದಿಳಿಯ ರಾಜಾಳಿಯಂ ಕೂಡಿ ದಾಱಿಟ್ಟು ವಾಯು ಸೂರ್ಯನ ಮುತ್ತ್ತದ ॥
ಚಂದದಿಂ ಪದಧೂಳಿ ರವಿಯ ಮುಸುಕಲು ಬೆಳಗು ।
ಕುಂದೆ ತದ್ವಂಶಜರು ಬಲಶಸ್ತ್ರಕಿರಣಂಗ ।
ಳಿಂದುಂಟುಮಾಡಿದನಲಾ ಭಾಸೆನಲ್ಕೆ ಪೆರ್ಬಡೆ ನಡೆದುದೇನೆಂಬೆನು ॥ ೬

ಕೂಟದರಸರ ಮಣಿಕಿರೀಟಸಾಮಗ್ರೀಯ ।
ಕೋಟಾನುಕೋಟಿಗಳ ಮಾಟದಾಪ್ರಭೆಗಳಿಂ ।
ಮೀಟಪ್ಪ ಭೇದದಾನೋಟದಬಲೆಯರ ಹೃತ್ಕ್ರೋಟರದ ಸಂತೋಷದ ॥
ಆಟದಿಂ ದಾನಾರ್ದ್ರದೂಟದಳಿಗಳ ಸಮು ।
ಚ್ಚಾಟನದ ಶ್ರುತಿಯುಗಾಸ್ಫಾಟನದ ಕರಿಗಳಿಂ ।
ಘೋಟಕಂಗಳನಡರಿಯೋಟಗಳಿನೆಯ್ದೆ ಶಶಿಜೂಟನ ಭುಜಾದಂಡರು ॥ ೭

ಸೋಮಸೂರ್ಯರ ವೀಥಿಯಲ್ಲಿ ಬರುತಿರೆ ಸಾರ್ವ ।
ಭೌಮನಣುಗರು ಮುತ್ತುರನ್ನಗಳ ದಿವ್ಯಪ್ರ ।
ಭಾಮಯದೆ ನೆರೆ ನೋಟ್ಪ ವನಿತೆಯರ ಹೃದ್ವದನಕುಮುದಕಮಲಂಗಳಲರೆ ॥
ಶ್ರೀಮನ್ಮಹಾನೇತ್ರವೆನಿಸುವ ಚಕೋರತತಿ ।
ರಾಮಣೀಯಕಮಿಥುನಕುಚಕೋಕಗಳು ನಲಿಯೆ ।
ಮಾಮರ್ಝರೆ ಭಾಪಿರುಳು ಪಗಲೊಂದುಗೂಡಿದಂತಿರ್ದುದಾಸಮಯದಲ್ಲಿ ॥ ೮

ಸೌರಂಭದಿಂ ನಡೆದ ಭೂರತೀಶ್ವರರೂಪ ।
ರಾರವಾಕರಪುರದ್ವಾರವಮಂ ತಳರ್ದು* ಗಂ ।
ಭೀರನಾದ್ಯಂಗಳ ಮಹಾರವಂಗಳು ಪೊಣ್ಮಲೋರಂತೆ ನಡೆದು ಬಂದು ॥
ಸಾರತರವೈಹಾಳಿಯಾರಮ್ಯಸುಸ್ಥಲವ ।
ಸೇರಲಿಕ್ಕೆಲದಲ್ಲಿ ಪೌರಜನರೀಕ್ಷಿಸೆ ಕು ।
ಮಾರಕರ ಬಲದ ವಿಸ್ತಾರವೆಸೆವುನ್ನತಿಯನಾರಯ್ಯ ಬಣ್ಣಿಸುವರು ॥ ೯

ಗಜಘಟಾಕೋಟಿ ನಿಂದುವು ಮೂಡಲೊಳು ರಥ ।
ವ್ರಜವಿನವರೂಥಾಭಿಮುಖವಾದ ಪಶ್ಚಿಮದ ।
ನಿಜದಿಕ್ಕಿನಲ್ಲಿ ಮೇಳೈಸಿದುವು ವಾಜಿಗಳ ಥಟ್ಟು ಕವಿದುತ್ತರದೊಳು ॥
ಭುಜಬಲದ ರಾವುತರನುಜ್ಞೆಯಿಂದೊಪ್ಪಿ ಗಜ ।
ಬಜಿಪ ಕಾಲಾಳ್ಗಳಂತಾತೆಂಕಣಧಿಕದಿ ।
ಗ್ವಿಜಯರಾಗಿರ್ದರೆನಲಾ ಕುಮಾರರ ಬಲವನಿಳೆಯೊಳಾವಂ ಬಣ್ಣಿಪಂ ॥ ೧೦

ತರಣಿ ಲೋಕಾಲೋಕಪರ್ವತಾಗ್ರಮನಿಂತು ।
ತಿರುಗುವಂ ತದ್ವಂಶಭವರಾವೆಮೆನುತ್ತೆ ಬಿ ।
ತ್ತರಿಪಂತೆ ಜಲಧಿಪರಿವೃತಧರಾಮಂಡಲಾಧೀಶತೆಯ ತೋಱುವಂತೆ ॥
ಹರನ ಕೈಲಾಸವಮಂ ಪೊಕ್ಕಲ್ಲಿ ಮೆಱೆವ ಶಂ ।
ಕರನ ಬಲಗೊಂಬಂತೆ ವಾಜಿಗಳು ತಿಱ್ಱಿಂದು ।
ತಿರುಗುವೆಡೆಯುವನಿಕ್ಕುತೆಸೆದಿರ್ದರಾಕುಮಾರರು ಲೋಕಕತಿಧೀರರು ॥ ೧೧

ಗಮ್ಮನಿಕ್ಕೆಲದಲ್ಲಿ ಸೇನೆ ಪೌಜಿಪ್ಪಣ್ಣ ।
ತಮ್ಮಂದಿರಿದಿರಾಗಿ ಖೋಯೆಂದು ಸಕಲವಾ ।
ದ್ಯಮ್ಮೊಳಗೆ ಬೊಡ್ಬಿಡುತೆ ರಥರಥಕೆ ಕರಿ ಕರಿಗೆ ಹಯ ಹಯಕೆ ಭಟಭಟರ್ಗೆ ॥
ತಮ್ಮೊಳಗೆ ತಾವು ಪೆರ್ಗಾಳೆಗದ ಮಾಟಿಸ್ಕೆಯಿಂ ।
ದಮ್ಮಮ್ಮ ಪೊಣರ್ದರಿಳೆ ಕಮಠಫಣಿರಾಜಾಳಿ ।
ಬಿಮ್ಮಗಿಡಲಲ್ಲಿ ಮಱೆದುದು ಭಾಪು ಚತುರವೈಹಾಳಿ ಹರ್ಷದ ಛಡಾಳಿ ॥ ೧೨

ಕಡುಪಿನಿಂ ವೇಡೆಯುದೆ ಬೀದಿಯಿಂ ತೀವ್ರದು ।
ಗ್ಗಡದ ಬಹುಗಮನದಿಂ ಲಂಘಿಸುತೆ ಬಳಸುತ್ತೆ ।
ಬಿಡೆ ಸರಿಸದಿಂದೋಡಿ ಚಾರಿವರಿದಾಡಿಸುತೆ ಹರಿಣವಾಯುಗಳ ಬಟುಕ ॥

ಒಡನೆಸುಗೆಯುಂಬ ವೀಱುವ ದಿಟ್ಟಿಗಳ ಮನದ ।
ನಿಡುವೇಗಮಂ ಜಱಿಯುತಿರ್ಪತಿತುರಂಗಮಂ ।
ಪೊಡವಿಪಾಲಕನಣುಗರೇಱುತ್ತೆ ವೈಹಾಳಿಯುತ್ಸಾಹಮಂ ತಳೆದರಾಗ ॥ ೧೩

ತಿರುಗಿದರು ವೈಭವದೊಳಾಕುಮಾರರ್ಕಳಾ ।
ಶರಣತತಿ ನೋಡಿ ಹಾರೈಸಿ ಮಝುಭಾಷಿವರ ।
ತುರಗಂಗಳಾಮಂದರಾದ್ರಿಯಂ ಮೆಟ್ಟೆ ಕನಕಾಚಲಕ್ಕಡರಿ ಬಱಿಕ ॥
ಹರನ ರಾಜತಗಿರಿಯ ಪೊಕ್ಕು ಶಾಂಭವಲೋಕ ।
ದುರುಗಣಾಡಂಬರದೊಳಿಂತಿವರನೀಡಾಡ ।
ದಿರವೆಂದು ಪೊಗಱಿ ಚೋದ್ಯಂಗಳಿಂ ನೋಡುತಿರೆ ಬಂದು ಪುರಮಂ ಪೊಕ್ಕರು ॥ ೧೪

ಲೋಕನೇತ್ರನ ಕುಲೋದ್ಭವಕುಮಾರರ್ಕಳಂ ।
ಕೋಕಕುಚೆಯರು ಕನಕಹರ್ಮ್ಯಂಗಳೆಡೆಯೊಳಾ ।
ಲೋಕಿಪರು ಕೆಲರು ಜಾಳಕದೆಡೆಗಳೊಳು ಕೆಲರು ಸಾಲಭಂಜಿಕೆಗಳೆಡೆಯ ॥
ಜೋಕೆಯೊಳು ಕೆಲರುಱಿದ ಮಱಗಳೊಳು ಕೆಲಕೆಲರ ।
ನೇಕಪ್ರಕಾರದಿಂ ನೋಡುತಿರ್ಪೆಡೆಯೊಳಾ ।
ನಾಕಾಧಿಪನ ಸಿರಿಯ ಜಱದುದಂದವರ ನಾಹಿನಿ ಸಕಲಜನಮೋಹಿನಿ ॥ ೧೫

ತಾವೆ ನೋಡುವ ದಿಟ್ಟಿಗಳು ಕುಮಾರರ ದೇಹ ।
ಲಾವಣ್ಯರಸದೊಳಗೆ ಮಾರ್ಪೊಳೆಯುತಿರೆ ಚೋಳ ।
ಭೂವರಂಗೊಗೆದು ದೇವೇಂದ್ರನತಿಶಯಭೋಗದಿಂದಲಿಮ್ಮೆಯ್ಯಾದನೋ ॥
ಆವಿಚಾರಮುದಲ್ತು ಬೆಂದ ಕಾಮಂ ತನ್ನ ।
ಭಾವದಿಂದೊಗೆದು ಸಾಕ್ಷಾದಮಳರೂಪಾದ ।
ನೋ ವಿಚಾರಿಪೆವೆಂಬವೊಲೀಕ್ಷಿಸುತ್ತಿರ್ದರಾ ಪುರದ ನಲ್ವೆಂಡಿರು ॥ ೧೬

ಗಂಗಾಧರನ ಭಕ್ತೆ ತಿರುಕೊಳವಿನಾಚಿಯೆಂ ।
ಬಂಗನೆ ಪವಿತ್ರಜಲಘಟವನುರೆ ಪೊತ್ತು ಪೆಱ ।
ಪಿಂಗದಾಪಂಚವರ್ಷದ ಕುಮಾರಂಬೆರಸು ಮುನ್ನ ತಾಂ ನೀರಡಕುವ ॥
ಲಿಂಗವಂತರ ಮನೆಯ ಪೊಕ್ಕು ಹರವಿಯನಿಱಿಪ ।
ಲಂಗಳದೊಳಿರ್ದ ಮಗನಾರಾಜವೀಧಿಯೊಳು ।
ಮುಂಗುಡಿಯೊಳೊದಗಿ ವಾದ್ಯಂಗಳಿಂ ಬರ್ಪ ಸೇನೆಯ ನೋಡೆ ಪೊಱಮಟ್ಟನು ॥ ೧೭

ನಡುಬೀದಿಗೈದಿ ಬಾಲಕನೀಕ್ಷಿಸಲ್ಲಿ ಪೆ।
ರ್ಬಡೆ ಕವಿಯೆ ಬೆಱಗುವಟ್ಟಿರಲು ದೊರೆಪೌಜು ಬಂ।
ದೊಡನೊದಗಲಿಟ್ಟಣಿಪ ಜನದ ಕಡೆಗಾಲ್ಗಳಿಂದಾಸುತಂ ಪೊಡೆಗೆಡೆಯಲು ॥
ಕಡುತವಕದಿಂ ಬರ್ಪ ಮಂತ್ರಲಕ್ಷ್ಮಂ ಕಂಡು।
ನಿಡುದನಿಯೊಳೊದಱಿ ತೇಜಿಯ ಹಾಂಟಿಸಿದನಾಹ।
ತೊಡರರಭವನ ಶರಣರಾಚತುರ್ವಿಧಪಥಕ್ಕೆಂಬಂದದಿಂ ತಪ್ಪುತೆ ॥ ೧೮

ನೋಡಿ ಕೈಯೂಱಿ ಬಾಲಕನೇಳುತಿರ್ಪಲ್ಲಿ।
ಕೂಡೆ ಬಂದೊದಗಿತ್ತು ಮಿತವಚನನಶ್ವಮುರೆ।
ಜೋಡಿಸುತ್ತಾಹ ದಾಂಟಿದುದದೇಂ ಸಿಕ್ಕಿದಂ ಹರ ಮಹಾದೇವ ಯೆಂದು ॥
ಆಡೆ ಸರ್ವರು ಖುರಂ ತನಯನ ಕೊರಲ್ದಾ*ಗ।
ಲೀಡಾಡಿದೊಲು ಪಱಿದು ಪುಟನೆಗೆಯೆ ದೊರೆಯಿಟ್ಟ।
ಗಾಡಿಯುಹ ತಾರಹಾರಂ ಕಿಱುತ್ತಗಲು ಧರೆಗೆ ಬಿರ್ದುದು ಶಿರಶ್ಚಂದ್ರಮಂ ॥ ೧೯

ಕಂಡು ಹರಹರ ಮಹಾದೇವಯೆಂದಲ್ಲಿ ಭೂ।
ಮಂಡಲಾಧಿಪನ ಕುವರರು ಮಕುಟವರ್ಧನರ।
ತಂಡಸಹಿತಕ್ಕಟ ಇದಾರೊ ಕಲಿಗಣವರಂ ಖಂಡೆಯದೊಳಂದು ಹೊಡೆದ ॥
ತುಂಡವೆನಲಿದೆ ಶಿವನ ಭಕ್ತವಧೆಯಾದುದಿದ।
ಖಂಡಪರಶುವೆ ಬಲ್ಲನೇನಾಯ್ತು ಫಡಫಡಾ।
ಗಂಡರಾವಲ್ತೆ ಮಿಱಿದೊಡೆ ಕೈಲಾಸಮಂ ಸೂಱೆಯಂ ಕೊಂಬೆವೆನುತೆ ॥ ೨೦

ಸೂರರಾಧೃತಕಿರಣಸಂಗದಿಂ ನಿಜಹೃದಯ।
ವಾರಿಜಮನಲರಿಸುತೆ ನಡೆದು ರಾಜಾಲಯ।
ದ್ವಾರದೊಳು ನಿಂದು ನಿಶ್ಚಯಿಸಿ ಸರ್ವರ ಯಥಾಕ್ರಮದಿಂದ ಬೀಱುಕ್ಕುಡುತ್ತ ॥
ವಾರುವಂಗಳನಿೞಿದು ಚೋಳಭೂಮೀಶನ ಕು।
ಮಾರರರಮನೆಯ ಹೊಕ್ಕಿರಲಿತ್ತಲತ್ತಲಾ।
ಪೌರಜನಮಾರುಂಡಮುಂಡಮಂ ಕಂಡು ಕಡುಮುಱುಗಿ ನುಡಿಯುತ್ತಿರ್ದರು ॥ ೨೧

ಅಂದು ಭಕ್ತನ ಬಡಿದ ಮಾರುಡಿಗೆಯಾನಾಚಿ।
ತಂದೆಯಂ ನೀಗಿ ಬತ್ತಲೆಗ ಸವಣರ್ ಕೆಟ್ಟ।
ರೊಂದಲನ್ಯಾಯಮೆಲೆ ನಾಥ ಚೋಳಂ ಬಿಜ್ಜಳಂ ಬೞಿಕಲುದಯಭೂಪಂ ॥

ಮುಂದುಗೆಟ್ಟಳಿಂದರಿಂತೆಲೆ ನಿಮ್ಮ ಭೂವಿಭಾಶ ।
ನಿಂದುಧರಭಜಕನಿಂದೀಶಿವದ್ರೋಹಮೈ ।
ತಂದುದಿದ ಕೇಳಲೇಂಗೆಯ್ವನೋ ಶಿವಶಿವ ಮಹಾದೇವಯೆನುತಿರ್ದರು ॥ ೨೨

ಈವಿಧದೊಳಖಿಳಜನಮುಲಿಯುತಿರಲಿತ್ತಲಿ ।
ನ್ನೇವೇಳ್ವೆನತ್ತಲವರಮ್ಮನಿರ್ದಂಗಣದ ।
ತಾವಿನೊಳು ಸುತನ ಕಾಣದೆ ಹೆದಱಿ ನಾಲ್ದೆಸೆಗಳಂ ನೋಡಿ ಹಮ್ಮೈಸುತ ॥
ಜೀವನವನುಳಿದ ಘಟಸಹಿತ ಪೊಱಮಟ್ಟು ಶೋ ।
ಕಾವಸ್ಥೆಯಿಂದೆ ಪೆಸರಂ ಪಿಡಿದು ಶಂಕರನೆ ।
ಯಾವೆಡೆಗೆ ಪೋದೆ ಮಗನೇ ಮಗನೆ ಯೆನುತೆ ಪರಿದಾಡಿ ಕರೆಯುತ್ತಿರ್ದಳು ॥ ೨೩

ನಾರಿ ಕಂಗೆಟ್ಟು ಬಾಯ್ಬಿಡುತಿರ್ದೊಡಿವಳಾಕು ।
ಮಾರಕನ ತಾಯಲ್ಲದಿರಳಿದಂ ಕಾಣುತಾ ।
ವಾರುಮಕಟಾ ಜೀವಮಂ ಕೊಂಡು ಬದುಕಬಹುದೇ ಶಿವಂ ಬಲ್ಲನೆನುತೆ ॥
ಪೌರಜನವಿಂತೆಂದುದೆಲೆಯಮ್ಮ ನೀನದೇಂ ।
ಕಾರಣಂ ಪಂಬಲಿಪೆಯೆನಲೆನ್ನ ಕಂದನಿಂ ।
ತೀರಾಜದಟಿದೆಡೆಗೆ ಬಂದನಾತನನಱಸಿ ಕಾಣೆನಯ್ಯೋ ಎಂದಳು ॥ ೨೪

ಮುಂದುಗೆಟ್ಟಳಿಲುವಾಕೆಗೆ ಕೆಲಂಬರು ಪೇಳ್ದ ।
ರಿಂದೀಗಳರಸುಗುದುರೆಯ ಪದಖುರಾಗ್ರಹತಿ ।
ಯಿಂದೊರ್ವ ಸುತನಳಿದನದೆ ನೆರವಿಯೆನೆ ಕೇಳಿ ಹಾ ! ಮಹಾದೇವಯೆನ್ನ ॥
ಕಂದನಂ ಕಲ್ಪಕುಜದಂದನಂ ವಿಮಲಗುಣ ।
ವೃಂದನಂ ಸಾಕ್ಷಾತುನಂದನನನವಿಚಾರ ।
ದಿಂದಾವ ಕೊಂದನೋ ಎಂದು ಪರಿದಾಜನಂ ನಿಂದಲ್ಲಿಗೈತಂದಳು ॥ ೨೫

ಮುತ್ತಿರ್ದ ಜನಮುನುರೆ ಬಗೆದೊಳಪುಗುತ್ತಲಾ ।
ನೆತ್ತಱಂ ರುಂಡಮಂ ಮುಂಡಮಂ ಕಂಡು ಹಾ ! ।
ಮತ್ತನುಜ ! ಹಾ ಕಂದ ! ಹಾ ಮುದ್ದುಮಗನೆ ! ಹಾ ! ಹಾ ! ಕೆಟ್ಟೆನೆಂದೊಱಲುತೆ॥
ಎತ್ತಿಕೊಂಡಾತಲೆಯನೆರ್ದೆ*ಯ ಗುಂಡಿಗೆಯೊಳಮ ।
ರ್ದೊ*ತ್ತಿ ಶಿವಥೋಯೆಂದು ತನುವನಿಳೆಗೀಡಾಡಿ ।
ಮತ್ತುಬ್ಬಿ ಬಿಬ್ಬಿ ಹೊರಳುತ್ತೆ ದುಃಖದ ಕಡಲೊಳೀಸಾಡುವಂತಿರ್ದಳು ॥ ೨೬

ತೋಱಿದ ಜಲಂ ತಾಯ ತಲೆವೆಟ್ಟನಲ್ಲಿ ಕಾ।
ಲೂಱಿ ಕುವರನ ಕಂಧರಸ್ಥಲದೊಳಾಕುದುರೆ।
ಯೇಱಿದನ ಕರವಾಳಿನೊಳು ಮಿಂಚಿಯುವನ ಕಂಠದ ಸರಂ ಪರಿದು ಬಿಟ್ಟು॥
ಬೇಱಿಹೊಂದು ತಾವಿನೊಳು ಗಾಲಿವರಲುಗಳಾಗೆ।
ಚೀಱುವಂಗನೆಯುಬ್ಬರದೊಳೊದವೆ ಸಿಡಿಲಟುವ।
ಮಾಱುದನಿಯುವಳ ಕಣ್ಣೊಳು ಕಱಿಯೆ ಮಟಿ ಶೋಕ ವರ್ಷಋತುವೆನಲೆಸೆದುದು॥೬೭

ಎಲೆ ಮಗನೆ ನಿನ್ನಯ ವಿಲೋಚನಂ ಕಂದಿದುವೆ।
ಸಲೆ ಶಶಿಯ ಪೋಲ್ವ ಮುಖಮೈದೆ ಕೊರಗಿತ್ತು ಮಂ।
ಗಲಸೌಮ್ಯವಱತುದೇ ಗುರುಕೃಪೆಯುದೇನಾಯ್ತು ಸಕಲಕಾವ್ಯಂಗಳೊಳಗೆ॥
ಸುಲಭಸೌರಿಗಳು ಪುತ್ರನೆ ಮೋಹತಮವೆಂಬ।
ರೊಲವಿನಿಂದೀಭೂಮಿಯಿರಲು ಸಾಕೇ ತುರಗ।
ದಲಘುಚರಣಕ್ಕೆ ಬಲಿಯಾದೆಲಾ ಗ್ರಹಬಲಂ ತಪ್ಪಿತಕಟಾಯೆಂದಳು॥　　೬೮

ಜಾಣ ನಂಬ್ಯಣ್ಣನಣುಗನ ಮೊಸಳೆ ನುಂಗಲಾ।
ಯೇಣಲೋಚನೆ ನಂಗೆಯುಟುವಂತೆ ಕಿನ್ನರನ।
ಪ್ರಾ*ಣವಂ ಶಂಭು ತನ್ನೊಳಗುಮಾಡಲು ಬಸವರಾಜನೊಱಲುವ ಮಾಟ್ಕಿಯಿಂ॥
ಮೇಣು ಮೃಡಶಿಶುವಿಗಮ್ಮವ್ವೆ ಶೋಕಿಪ ತೆಱದಿ।
ನಾಣದಂಗನೆ ಮಕರಕೇತನಧ್ವಂಸಿಯ।
ಕ್ಷೀಣಭಕ್ತರ ನಿಧಾನವೆ ಮರಣರಹಿತ ಸೈರಿಸಲಾರೆನೆಂದತ್ತಳು॥　　೬೯

ಚೀಱಿ ಬಿದ್ದೊಱಲಿ ಪಿಂದಕ್ಕೈಟುದ ತನ್ನ ಸುತ।
ನಾ ರುಂಡ ತಾಣದೊಳಗಾರುಂಡಮಂ ಬೈತು।
ಸೀಱನೇ! ಸುಕುಮಾರನೇ! ಚೆಲ್ವಕಂದ! ಹಾ! ಹಾ! ಕೆಟ್ಟೆನೆಂದೊಱಲುತ॥
ಸೀಱುತಳವಱಯುತ್ತ ಸರ್ವರ್ಗೆ ಕರುಣವಂ।
ತೋಱುತರಮನೆಯ ಬಾಗಿಲ್ಗಾಗಿ ನಡೆದು ನೆರೆ।
ಗಾಱಾಗಿ ಸತ್ಯೇಂದ್ರಚೋಳನರನಾಥ ಶಿವಧೊಯೆಂದು ಮೊಱಯಿಟ್ಟಳು॥　　೭೦

ಈಪರಿಯ ದುಃಖವಾರ್ಧಿಯ ಮೊಱಯ ಕರ್ಣದ್ವಾ।
ರಾಪೂರ್ಣಮಪ್ಪಂತೆ ಕೇಳಿ ಶಿವಶಿವಯೆನುತ।
ಭೂಪಾಲನಿದು ಶಿವನ ಭಕ್ತರ್ಗೆ ಬಂದ ವಧೆಯುಪ್ಪುದೆಂದಱುದು ನೊಂದು॥

ಕಾಪಾಲಿಯೋ ಬಲ್ಲನಿಂತಿದಱ ಬಗೆಯ ನಾ ।
ವೇ ಪರೀಕ್ಷಿಸಬೇಹುದೆಂದಧಿಕರೋದನಾ ।
ಲಾಪವೆಲ್ಲಿಯದೆಂಬ ಮಾತ್ರಕ್ಕೆ ಬಂದು ದೌವಾರಿಕಂ ಕೈಮುಗಿದನು ॥ ೩೧

ಜೀಯ ಬಿನ್ನಪಮರಿದ ತಲೆಯ ಪಿಡಿದೊರ್ವಳಳೆ ।
ಕಾಯಜವಿನಾಶನಂ ನೆನೆದು ಮೊಱೆಯಿಟ್ಟೊಱಲಿ ।
ಬಾಯಱಿಯುತ್ತೈದಳೆ ದಯಾಭರಿತಯೆಂದು ನೃಪನಾಣತಿಯೊಳಾಸೇವಕಂ ॥
ಆಯುವತಿಯಂ ಸಭಾಮಂಟಪಂಬುಗಿಸಲಾ ।
ರಾಯನಿದಿರೊಳಗೆ ಕಂದನ ತಲೆಯ ತಂದಿಟ್ಟು ।
ಹಾಯೆಂದು ಬಿಷ್ದೊಱಲುವಾಕೆಯಂ ಕರುಣದಿಂ ಬೆಸಗೊಂಡನಾ ಭೂಪನು ॥ ೩೨

ಆರು ನೀನೆಲೆ ತಾಯೆ ಪಱಿದಿರ್ದ ತಲೆಯಾತ ।
ನಾರು ಚೆಲ್ವಣುಗನಂ ಕೊಂದ ದುಷ್ಕೃತಕರ್ಮ ।
ಯಾರು ಶಿವಶಿವ ಪೇಟ್ಟುದೆನಲೆದ್ದು ಭೂಪಂಗೆ ಕರಕಮಲಮಂ ಮುಗಿಯುತ ॥
ನಾರಿ ತೊಡಗಿದ ಕೋಟದುಃಖದಿಂ ನುಡಿದ ನುಡಿ ।
ಕೂರಂಬಿನಂದದಿಂ ಹೃದಯಮಂ ತಟ್ಟುಗಿಯ ।
ಲಾರಾಯನಾಲಿಸುತ್ತಿರೆ ಸಭಾಜನವೈದೆ ಮಲಮಱುಗಲಾಯೆಂದಳು ॥ ೩೩

ದೇವ ನಿಮ್ಮಯ ಪಿರಿಯ ಪಟ್ಟಣದ ಸಕಲವಣಿ ।
ಜಾವಳಿಗಳೊಳಗಾದ ಮಾರ್ತಂಡನಾಮಿಯಹ ।
ಶೈವಸಂಪನ್ನನಾದಾಸೆಟ್ಟಿಯಖಿಳಸಂಪತ್ತಿಯಿಂ ಶಿವಭಕ್ತರ ॥
ಸೇವೆಯೇ ಪ್ರಾಣವಾಗಿಹನು ತತ್ಸತಿಯಾನು ।
ಜೀವಿಸುತೆ ಗಂಡುಮಕ್ಕಳನಱುವರಂ ಪಡೆದೆ ।
ನಾವಿಶೇಷದ ಭಾಗ್ಯಭೂಚಕ್ರವರ್ತನೆಯ ಸಿರಿಯೆನಲು ಸುಖವಿರ್ದೆನು ॥ ೩೪

ಎನ್ನ ಪತಿ ಮಾರ್ತಂಡಮಣಿಜಾತನೊರ್ವ ಸಂ ।
ಪನ್ನಮಹ ಚೈತ್ರದೊಳು ವಸ್ತುಗಳ ತನಗುಳ್ಳ ।
ಪೊನ್ನೆಲ್ಲಮಂ ತುಂಬಿ ಜಲಮಾರ್ಗದೊಳು ಪೋಪ ಕಾಲದೊಳು ಪಡಗೊಡೆಯಲು ॥
ಮುನ್ನೀರೊಳಸ್ತಮಯವಾದನಾರ್ಜಿಸಿದ ಸಿರಿ ।
ತನ್ನಯ ತವರ್ಮನೆಯ ಪುಗುವಂದದಿಂ ಮುಱುಗ ।
ಲಿನ್ನೆಮ್ಮ ದೌರ್ಭಾಗ್ಯದಗ್ಗಳದ ದುಃಖಮಂ ಚಿತ್ತೈಸು ಚೋಳಭೂಪ ॥ ೩೫

ಲೋಕಕ್ಕೆ ಕಣ್ಣಾಗಿ ಬಾಳ್ವವನ್ಮ ಮಿತ್ರನಾ ।
ನಾಕಸ್ಥನಾದನೆಂದಾಪ್ತರಳಲುತ್ತಿರ್ದ ।
ರಾಕುಮಾರಕರಱುವರಂ ನೋಡಿ ಜೀವವಿಡಿದಿರಲು ಪತಿಯಳಿವಂದಿನ ॥
ಆಕಾಲಕೊದವಿರ್ದ ಮೂಱುತಿಂಗಳ ಗರ್ಭ ।
ನೂಕಿತ್ತು ಬಳಿಕದಧಿಕ ದಾರಿದ್ರ್ಯವಡಸಿತ್ತು ।
ಭೂಕಾಂತ ಕೇಳ್ಕೆಯ ಮೇಲೆ ಬಱಸಿಡಿಲಂತೆ ಬರ್ಪನ್ನ ಬಹುದುಃಖವ ॥　　೩೬

ಆಱುಮಕ್ಕಳುಗಳೆಲ್ಲಂ ಮಡಿದರಯ್ಯ ಕೇ ।
ಳಾಱುತಿಂಗಳ ದಿನಕೆಯೊರಲಿ ಬಾಯ್ಬಿಡುತಿರ್ದೊ ।
ಡಾಱುಮೊಗನ್ಯೆಯನೆನ್ನಯ ಕನಸಿನೊಳ್ ಬಂದು ತಿರುಕೊಳವಿನಾಚಿ ಕೇಳು ॥
ನೀಱನಹ ಸುಕುಮಾರನುದಯಿಪಂ ನಿನಗವಂ ।
ತೋಱಿಪಂ ಮುಕ್ತಿಯಂ ಚಿಂತಿಸದಿರೆನಲು ನಲ ।
ವೇಱಿ ಬೆಸಲಾದೆನೀಪುತ್ರನಂ ನಿರ್ಮಲಚರಿತ್ರನಂ ಶುಭಗಾತ್ರನಂ ॥　　೩೭

ಕಡಲ ಮಧ್ಯದೊಳಾಣ್ಮನಱಿದ ಚಿಂತೆಯ ಧನಂ ।
ಗಿಡಲು ದಾರಿದ್ರ್ಯಮಾದಱಲನಾಸುತರಾಱು ।
ಮಡಿದ ಬೇಗೆಯನು ಮಱಸಿದನಾಗಿ ಶಂಕರನೆನಿಪ್ಪ ನಾಮವನೆ ಕೊಟ್ಟು ॥
ಕೊಡನೀರ ಪೊತ್ತು ಪೊರೆವವಳ ನಿನ್ನಯ ಕುವರ ।
ರಡರಿ ಬಿನದಿಪ ತುರಂಗದ ಕಾಲ್ಗೆ ಬಲಿಯ ಬಿದಿ ।
ಪಡೆದನೇ ಮುದ್ದುಮಗನಂ ಶಿವಾ ಯೆಂದೊಱಲುತಿರಲು ಭೂಭುಜನೆಂದನು ॥　೩೮

ಮನುಚೋಳನರಿಸನೆ ರಥಾಂಗದಿಂ ಪಶುವಧೆಯ ।
ತನಯನಂ ಕರುವೂರ ಚೋಳನಿಭವರಿದ ಭ ।
ಕ್ತನಿಗೆ ತಲೆಗುಡನೇ ಪಗಲ್ಚೋಳನೀಯನೇ ಜಡೆದಲೆಗೆ ಮುಡಿದಲೆಯನು ॥
ಘನ ಭಕ್ತವಾತ್ಸಲ್ಯ ಭಕ್ತಾಂಗ ಸದ್ಭಕ್ತ ।
ಜನ ಶಿರೋರತ್ನವಣುಗನ ಮರಣವಕಟ ! ಸು ।
ಮ್ಮನೆ ಪೋಗದಬಲೆ ಕೇಳೆಂದಾಗಳರಸಂ ಕುಮಾರರಂ ಬರವೇಳ್ದನು ॥　　೩೯

ಶಾತಾತಪಾದಿಸುಶ್ರೌತಾಳಿಸಂವಿನುತ ।
ಶೀತಾವನೀಧ್ರಜಾಮಾತಾತ್ಮಭೂಸುಪುರು ।
ಹೂತಾಸುರಾರಿಮುಖವಾತಾಪ್ತಲಪನವರಭೇತಾಳವೃಂದಮಧುರ ॥

ಗೀತಾದಿವಾದ್ಯಸುವ್ರಾತಾಗ್ರನಾಟ್ಯ ವಸು ।
ರೀತೋಬ್ಜಕಾಂಬಕ ಪ್ರೇತಾಧಿಪಾಂತಕ ವಿ ।
ಧೂತಾಘಗುರುಭಕ್ತಪೂತಾತ್ಮವಂಶಾಂಬುಜಾತಾರ್ಕ ವರಶಿವ ಜಯ ॥ ೪೦

ಇದು ಸಕಲಭಕ್ತಪದಪಂಕೇಜರೇಣುವು ।
ಸ್ತದ ಮಲ್ಲಣಾರ್ಯನಾಜೀರವೂಂಕಂಗೆ ಬೆಸ ॥
ಸಿದ ಭಕ್ತಸತ್ಯೇಂದ್ರಚೋಳಕೃತಿ ಭಾವಚಿಂತಾರತ್ನಮಮಳಕರ್ಣ ॥
ಹೃದಯಮಸ್ತಕವದನಸರ್ವಾಂಗಸೌಖ್ಯಕಾ ॥
ಸ್ಪದಮಖಿಳಸುಜನರ್ಗೆ ಪಂಚಾಕ್ಷರಿಯ ಮಹ ।
ತ್ತ್ವದ ಬೋಧೆಯೆಂದೋದಿದೊಡೆ ಕೇಳಿದರಿಗಿಷ್ಟಸಿದ್ಧಿ ಸರ್ವರಿಗಪ್ಪುದು ॥ ೪೧

ಎಂಟನೆಯ ಸಂಧಿ ಮುಗಿದುದು.

---

## ಒಂಭತ್ತನೆಯ ಸಂಧಿ

ಸೂಚನೆ ॥ ಅಮ್ಮನಣುಗನ ಪಟುಗೆ ಸುತನ ಕೊರಲಂ ಪಱಿದ ।
ಸಮ್ಮಂಧಕರಿದು ತಲೆಗಳೊಳಿತ್ತು ನಿಜಶಿರವ ।
ನುಮ್ಮಹದಿ ಪಡೆದಷ್ಟಮೂರ್ತಿಯೊಡನೈದಿದಂ ಕೈಲಾಸಕಾ ಚೋಳನು ॥

ಅಂಗಭವನಿಂ ತ್ರಿಪುರದಿಂ ಭಸಿತರುದ್ರಾಕ್ಷೆ ।
ಸಾಂಗವಾದುವು ನಿನಗೆ ಕಂತೆ ಕಟ್ಟಿಗೆ ಕಪ್ಪ ।
ರಂಗಳನಿಭಾಸುರನ ವಿಷ್ಣುವಿಧಿಗಳ ಸದೆದು ಬಲ್ಪಿನಿಂ ಸೆಳೆದುಕೊಂಡೈ ॥
ತಿಂಗಳಿಂದಿತ್ತಿತ್ತಲಾದ ಜಡೆ ಭಕ್ತಹೃದ ।
ಯಾಂಗಣದ ಸುಳುಹು ಗಣಸಂಸಾರಿಯುಪ್ಪರ್ಧ ।
ಜಂಗಮಂ ನಿನ್ನೀಮಹತ್ತಿಗೆಣೆಯಲ್ತಮರಗುಂಡವರಮಲ್ಲಿನಾಥ ॥ ೧

ನೈಜಕರ ಮೀಱದೆ ಕರೋಟಿಮೂಲಾಧರನ ।
ಪೂಜೆಯಂ ಮಾಡಿ ಪೊಱಮಟ್ಟು ಕುವರರು ನಡೆದು ।
ರಾಜಸಭೆಯು ಪೊಕ್ಕು ಕರಕಮಲಮಂ ಮುಗಿಯೆ ನೃಪನ ಹೃದಯದೊಳುಗ್ರದ॥

ಬೀಜವಗೆದೋಱುತಿರಲೇನಿದೆಲೆ ದುಷ್ಕೀರ್ತಿ ।
ಮೂಜಗವ ಪರ್ಬುವಂತೀಜವ್ವನದ ಸಿರಿಯು ।
ತೇಜದಿಂ ಶಿವಭಕ್ತನಂ ಕೊಂದಿರೆಂದು ಘುಡಿಘುಡಿಸಿ ಬೞಿಕಿಂತೆಂದನು ॥ ೨

ಚಿಲುಪಾಲಿನೊಳು ವಿಷಂ ತವರಾಜನೊಳು ಕೃಪೆ ।
ಸುಲಲಿತಸುಮುತ್ತಿನೊಳು ಭಿನ್ನವೊಪ್ಪುವ ಗುಣಾ ।
ವಲಿಯಲ್ಲಿ ಲೋಭವೆಸೆದಿಹ ಸತ್ಯದೊಳಗನೃತವಮರೆವಿಱಿದ ನಱುಗಂಪಿನ ॥
ಅಲರಿನೊಳು ಪುೞು ಶಿವಾಚಾರದೊಳು ದುರ್ನೀತಿ ।
ನೆಲಸಿದಂತೊಗೆದಿರ್ದೈ ಮತ್ಕುಲದೊಳೆಂದರಸ ।
ನೊಲೆಯೆ ಮಣಿಮಕುಟವದು ಹೃದಯಕೋಪಾಗ್ನಿ ತಲೆದೋಱಿತೆನಲಿಂತೆಂದನು ॥

ಚಾರುಶಶಿಧರಭಕ್ತಸದನಖಂ ಪೋಪಲ್ಲಿ ।
ವಾರಿಜಭವಾಂಡಕೋಟಾಕೋಟಿ ಮಡಿವುದು ತು ।
ಷಾರಕಣಕೋಟಿಯಂಶಕೆ ಸಾಟಿಯಲ್ತು ಗಡ ನಿಮ್ಮಳಿವು ತನ್ಮರಣದ ॥
ಓರಗೆಯೆನಲ್ಕೆ ನರಕಂ ಪೋಗದಿಂದೀಕು ।
ಮಾರಕನ ತುರಗಖುರಹತಿಯಿಂದ ಕೊಂದಾತ ।
ನಾರೆಂಬ ಮಾತ್ರಕ್ಕೆ ಮಿತವಚನನಕ್ಕಱಿಂದಯ್ಯನೊಡನಿಂತೆಂದನು ॥ ೪

ಜೀಯ ನಾವಿರ್ವರುಂ ವೈಹಾಳಿಯುಂ ಪೋಗಿ ।
ರಾಯರಾವುತರೊಡನೆ ಬರ್ಪೆಡೆಯೊಳೀಕ್ಷಿಸು ।
ತ್ತೀಯಣುಗನೆಡವಿ ಬಿೞಿಪ್ಪೊಡೆ ದಾಂಟಿತನುಜನಶ್ವಂ ಮತ್ತುರಂಗಖುರದ ॥
ಗಾಯದಿಂ ಮಡಿದನದಱಿಂ ಬಂದುದೆನಗಿಂದ ।
ಪಾಯಮೆನ್ನಯ ತಲೆಯನರಿವುದೇ ಧರ್ಮಮೆಂ ।
ದಾಯತಿಕೆಯಿಂ ಪ್ರಮಾಣಂದಪ್ಪದಾಡಿದಂ ಮಿತವಚನನಾಭೂಪಗೆ ॥ ೫

ಆದೊಡೀಪೞಿಗೆ ಮಿತವಚನನುತ್ತಮಶಿರ ।
ಚ್ಛೇದನಂ ಮಾಡಬೇಕೆಂದರಸ ನುಡಿಯಲಾ ।
ಹ್ಲಾದದಿಂ ಮಂತ್ರಲಕ್ಷ್ಮಂ ತನ್ನ ಕರಕಮಲವಂ ಮುಗಿದು ಬಿನ್ನವಿಸಿದಂ ॥
ಆದರಿಸು ಬೊಪ್ಪಯ್ಯ ಯೆನಗೆಯಣ್ಣಂಗೆ ಸಂ ।
ಪಾದನೆಗಳುಂಟನೃತವೆನ್ನ ಜಿಹ್ವೆಗೆ ಪೊರ್ದೆ ।
ಭೂದೇವಿಯುಂ ಬಿಟ್ಟಗಾಸೀಯೆನಾಂ ಭೋಗಿಯೆಂದು ಫಣಿಪತಿ ಮುಳಿಯನೆ ॥ ೬

ಭೂಪ ಚಿತ್ತೈಸಯ್ಯ ತಾಪಸರು ದಾರುವನ ।
ದಾಪವಿತ್ರಸ್ಥಲದೊಳೋಪ ತಮ್ಮಾಗ್ರವಮಾ ।
ಲಾಪದಿಂ ತಿಳಿದಖಿಳಪಾಪಕ್ಕೆ ಪುಸಿಯೊಂದನೇ ಪರೀಕ್ಷಿಸಿ ತೂಗಲು ॥
ಆಪಾತಕಂಗಳಂ ತಾಂ ಪಱಿದುದನ್ಯತಮೆನ ।
ಲೇಪರಿಯು ತಪ್ಪುವೆಂ ಹಾ ಪರೇತಾಧಿಪತು ।
ಲಾಪಾದಪಾಲಂಬನಾಪಘನನಪ್ಪನೇ ಕಾಪಾಲಿಯೋ ಬಲ್ಲನು ॥ ೭

ಇಂದು ವೈಹಾಳಿಯಂ ಪೋಪಲ್ಲಿಯಣ್ಣ ನಿಂ ।
ನಿಂದೆ ಬಂದಪರಾಧಮೆನ್ನದೆಂದಾಡಿದೆಂ ।
ಬಂದಹಿತಮಾದ ತಪ್ಪೆನ್ನದಿದು ನಿಶ್ಚಯಂ ಶಿವಭಕ್ತಿಶರಧಿಯುಪ್ಪ ॥
ಕಂದ ಶಂಕರನ ಶಿರಕೆನ್ನರಿದ ತಲೆರನ್ನ ।
ದಿಂದ ಸತ್ಕರಿಸಬೇಕೈಯ ಬೊಪ್ಪಯ್ಯ ನೀಂ ।
ಸಂದೆಗಂಮಾಡಲನುಚಿತವೆನ್ನಮಸ್ತಕವ ಪಱಿದು ಪಱಿಗೀಯೆಂದನು ॥ ೮

ಎಂದು ಕುವರಂ ಹರಣದಾಸೆಯಂ ಬಿಟ್ಟು ಧೃತಿ ।
ಯಿಂದಾಡೆ ಮನದೊಳಗೆ ಪರಿಣಮಿಸಿ ತಪ್ಪಿವಗೆ ।
ಬಂದುದಂ ತಿಳಿದು ಸತ್ಯೇಂದ್ರನುರೆ ತನ್ನ ಜೀವಸ್ವರೂಪದ ಮಂತ್ರಿಯು ॥
ಅಂದುಗ್ರದಿಂ ನೋಡುತಿವನ ತಲೆಯಂ ಪೊಡೆದು ।
ತಂದು ಪಱಿಗೀಯೆನೆ ಹಸಾದವೆನುತರಮನೆಯೊ ।
ಳಿಂದುಧರಪೂಜೆಯಂ ಮಾಡೆಂದು ಸುಕುಮಾರನಂ ಕಳುಪುತಾಸಚಿವನು ॥ ೯

ಕಳುಪಿ ಸುಕುಮಾರನಂ ಪತಿದ್ರೋಹಿ ಸನ್ಮಂತ್ರಿ ।
ಗಳಗಳನೆ ನಡೆದು ತನ್ನಾಲಯಂಬೊಕ್ಕು ನಿ ।
ರ್ಮಳರಾಜಪುತ್ರನೇ ಕಟ್ಟೊಡೆಯನವನ ತಲೆಯರಿವುದಕೆ ಮುನ್ನ ತಾನೆ ॥
ಅಱಿವೆನೆಂದೆನುತ ಸತ್ಯೇಂದ್ರನ ಮದೇಭನಿ ।
ರ್ಮಳಭಸಿತಗಾತ್ರನಲಗಂ ಪಿಡಿಯೊಳಳವಡಿಸಿ ।
ತಳತಳಿಸಿ ತನ್ನ ಕಂಠಕೆ ಹೂಣಿಸುತ್ತ ಶಿವಶಿವ ಕೊರೆಯಲನುಗೈದನು ॥ ೧೦

ಬಿಡೆ ಚೋಳರಾಯನ ಶಿರಃಪ್ರಧಾನಂ ಶಿಖಿಯು ।
ಪಿಡಿದನೆರಡಿಲ್ಲದಿಹ ಪತಿದ್ರೋಹಿಯೆಂಬಂತೆ ।
ಜಡಿದು ಪೂಣಿಸಿ ಕೈಯ ಖಡ್ಗದೊಳು ಘರಿಘರಿಲನರಿದನಾಮಸ್ತಕವನು ॥

ಒಡೆಯನಾಜ್ಞೆಯ ಮೀಱದಾಣ್ಮನಣುಗನ ತಲೆಯ ।
ಕಡಿಯಲಾಱದೆ ಸತ್ಯಮುಂ ಕುಱಿತು ತನ್ನ ತಾಂ ।
ಮಡಿದನೈ ಮಝುಭಾಪೆನುತ್ತೆ ಕೀರ್ತಿಸಿ ಮಱುಗುತಿರ್ದರೆಲ್ಲಾ ಸುಜನರು ॥ ೧೧

ಶ್ರೀಕಶ್ಯಪನ ಕಾಂತೆ ಶಿವನ ಲೋಚನಸೂರ್ಯ ।
ರಾಕೇಂದುಗಳಿಗೆಱಗಿ ವಿನತೆಯಾದಳು ಪಡೆದ ।
ಸ್ತೋಕಾಭಿಧಾನಮುಂ ಖಗರಾಜನೆಂದಿಡಲವಂ ತನ್ನ ಪೆಸರೊಡೆಯರ ॥
ಆಕರಿಪ ರಾಹುಕುಲಮುಂ ಕೊಲ್ವರೆಂತಂತೆ ।
ಭೂಕಾಂತರಿಪುಗಳಂ ತಡೆಗಡಿಯದೊಡೆಯನ ಮ ।
ಹಾಕುಮಾರನ ಕೊಲ್ಲಲಾಱೆನೆಂದಟ್ಟಿದ ಮಂತ್ರೀಶನೇಂ ಕೃತಪುಣ್ಯನೋ ॥ ೧೨

ಎಂದು ಸರ್ವರು ಮಱುಗುತಿರಲತ್ತಲಿತ್ತಲೈ ।
ತಂದು ಚೋಳನ ಕುಮಾರಂ ಭಸಿತರುದ್ರಾಕ್ಷಿ ।
ಯಿಂದಲಂಕರಿಸಿ ಕಾಪಾಲಿಯಂ ಶೂಲಿಯಂ ದಕ್ಷಯಜ್ಞಾಪಹರನಂ ॥
ಹೆಂದದುತ್ಸಾಹದಿಂ ತಲ್ಲಿಂಗಮುಂ ನೋಡಿ ।
ಕುಂದದಿರ್ಪಷ್ಟವಿಧಪೂಜೆಯಂ ಮಾಡಿಯಾ ।
ನಂದದಿಂದೊಡನೆರಸಿ ಕೊಂಡಾಡಿದಂ ಮಂತ್ರಲಕ್ಷ್ಮ ಶಂಕರನ ಪಕ್ಷಂ ॥ ೧೩

ಮಾದೇವನಂ ಕುವರನರ್ಚಿಸುತ ಸನ್ನದ್ಧ ।
ನಾದ ಕಾಲದೊಳಿತ್ತಲರಸುಗುವರನ ಶಿರ ।
ಶ್ಛೇದನಂ ಗೆಯ್ಯಲಾಣತಿಯಿತ್ತವಾರ್ತೆಯಂ ಕೇಳ್ದು ಪರಿತಂದಮ್ಮನ ॥
ಪಾದಕ್ಕೆ ನಮಿಸಲಡಿಗಡಿಗೆ ಬರೆಸೆಳೆದಪ್ಪಿ ।
ಮೋದದಿಂ ಮೊಗನೋಡಿ ನುಡಿದನೆನ್ನಯ ಕೊರಲ್ ।
ಕೊಯ್ದೆಡೆಯೊಳೈದುವೆಡೆಯೊಳಗಮೃತವತಿ ತಾಯೆ ನಿನ್ನ ನಾನೇ ಮಱೆವೆನೇ ॥ ೧೪

ಹಿಂದಣುಗರಿಲ್ಲದಾಯುಸವಟ್ಟು ಗುರುಕರುಣ ।
ದಿಂದೆನ್ನ ಪೆತ್ತು ಬಾಲ್ಯದ ಮುದ್ದು ನಡುಹರೆಯ ।
ದಿಂದೆಸೆವ ಸಿರಿಯ ನಡೆನೋಡಿ ದಣ್ಣನೆ ದಣಿವ ಕಾಲದೊಳು ನುಡಿದಪ್ಪಿಗೆ ॥
ತಂದೆ ತಾನೇ ಕೊರಲೊಗ್ಗಿಯಿಸಿದಪನೆಂದು ನೀಂ ।
ನೊಂದೊಡೀ ಧರ್ಮವತಿ ಪಿತೃಪತಿ ಮಹೋಗ್ರನಿಂ ।
ಬೆಂದಂದಮುಪ್ಪದದಳಿಂ ಮಱುಗಬೇಡಮೆಲ್ಲೆ ತಾಯೆ ಚಿತ್ತೈಸೆಂದನು ॥ ೧೫

ನುಡಿದ ಕುವರನ ತೆಗೆದು ತಕ್ಕೈಸಿ ಕೇಳೆನ್ನ ।
ಕಡವರವೆ ಚಿಂತೆಯೆನಗೇಕೆಯೆನ್ನಾಣ್ಮಸು ।
ಗ್ಗಡದ ಸತ್ಯವ ಕುಱಿತು ಭಕ್ತಂಗೆ ನಿನ್ನ ತಲೆಗುಡುವೆಡೆಯೊಳೆನ್ನ ಚಿತ್ತಂ ॥
ಪಡೆದ ಕಂದನನಾಪ್ತರೊಡನೆ ತವರೂರ ತಾ ।
ಯೆಡೆಗಟ್ಟುವಂದವೈ ಪೆತ್ತಬ್ಬೆ ಪಾರ್ವತಿಯು ।
ತೊಡೆಯೇಱಿ ಮುದ್ದುಗುಡುಪೋಗೆಂದು ಬೀೞ್ಕೊಡುವಮಾತೆಯೇಂಕೃತಕೃತ್ಯೆಯೋ

ಮನಶುದ್ಧವಹ ನಿಂಬಿಯಕ್ಕನಂ ಹಾಸದಾ ।
ನನದ ಬಲ್ಲಯ್ಯಂಗಳರಸಿಯಂ ದೇಶದೇ ।
ಶನಿಕಾಯದೊಳ್ ವಿನುತ ಚೀಲಾಳನಂ ಮನವನಿತೆಯಣ್ಣಲದೇವಿಯಂ ॥
ನೆನೆಯುತಿವರಾದಿಲಿಂಗಾರ್ಚನಾಶಕ್ತಿಯಿಂ ।
ತನುಜನೞಿವಂ ಲೆಕ್ಕಿಸದ ಮಾೞ್ಕೆಯೇ ಮಂತ್ರ ।
ವೆನುತಮೃತವತಿಯೆ ಬೀೞ್ಕೊಟ್ಟಳಂದಾಕುಮಾರನ ಮೋಹನಾಕಾರನಂ ॥ ೧೭

ಸುತನಿಂತು ವಧ್ಯಸನ್ನದ್ಧನಾಗುತ್ತೆ ನಿಜ ।
ಪಿತಗೆಱಗಲಿವನ ತಲೆಯರಿವುದಕೆ ಮಂತ್ರಿಗಾ ।
ಣತಿಯಿತ್ತೆವೇಗೆಯ್ದನೆನೆ ಜೀಯ ನಿಮ್ಮಾಜ್ಞೆಯಂ ಮೀಱದೀಕುವರನ ॥
ಹತಿಸದೀಶ್ವರಪೂಜೆಗೈದು ಬಹುದೆಂದು ಕಳು ।
ಪುತೆ ಶ್ರೀಘ್ರಗತಿಯೊಳಾಲಯಕ್ಕೈದಿ ಕಂಧರ ।
ಕ್ಕೃತಿಮುಳಿದು ನಿಜಮಸ್ತಕಂದರಿದುಕೊಂಡೞಿದನವನೆಂದರಾಸಭ್ಯರು ॥ ೧೮

ಎಂದೊಡದಕೇನು ನಾವಿರ್ದಪೆವೆನುತ್ತಲ್ಲಿ ।
ಮುಂದಿರ್ದ ಸಂದಾಯಿಯೆಂಬ ಲೆಂಕನ ಮುಖವ ।
ಮಂದಹಾಸದಿ ನೋಡಿ ನೀನೀಗ ಮಂತ್ರಲಕ್ಷ್ನನ ಶಿರೋಬ್ಜವನು ಪಱಿದು ॥
ತಂದು ಶಂಕರನ ತಲೆಗೀವುದೈ ಪೞಯನಾ ।
ನಂದದಿಂದೆನೆ ಹಸಾದಂ ಜೀಯಯೆಂದು ನೃಪ ।
ನಂದನನ ತೋಳ್ವಿಡಿದು ಜಡಿದು ಖಂಡೆಯದೊಡನೆ ನಡೆದನಾಹಾ ಭೃತ್ಯನು ॥ ೧೯

ಪೇೞಿ ನರಮೃಗರಾಜಚರ್ಮಾಂಬರನ ಭಕ್ತ ।
ಚೋಳನಣುಗನ ತಲೆಯ ಹೊಡೆಯಲ್ಕೆ ಬೀದಿಯೊಳು ।
ತೋಳ ಪಿಡಿದುಯ್ವಾಗಳಜನಸಂಬಂಧ ಲಿಖಿತಪ್ರಮಾಣದ ಜೀವಿಯೇ ॥

ಆಳೋಚನದಿನಣ್ಣ ನೀಂ ಬಂದ ತಪ್ಪು ವೈ।
ಹಾಳಿಯೊಳಗೆನ್ನದೆಂದಾಡಲಿಂತಾಯ್ತೆಂದು।
ಗೋಱುಟ್ಟು ಪುರಜನಂ ಪರಿಜನಂ ಶಿವಶಿವಾಯೆಂದು ಮಱುಗುತ್ತಿರ್ದರು ॥ ೨೦

ಬಱಿದೆ ಸೈಂಧವನೃಪಂ ಬರಲೇಕೆ ಸಭೆಯೊಳಿಳೆ।
ಯೆಱೆಯುಗಾಣ್ಕೆಗೆ ತುರಂಗಗಳೇಕೆ ವಸುಧೇಶ।
ನೆಱಕದಿಂ ಕುವರರ್ಗೆ ಕುಡಲೇಕೆ ರಾಗದಿಂ ವೈಹಾಳಿವೋಗಿ ಸೊಬಗ ॥
ಮೆಱೆವ ಕೋಟಲೆಯೇಕೆ ಜವ್ವನಿಗನಶ್ವದಿಂ।
ಕೆಱುಗೂಸು ಮಡಿಯಲೇಕಾಬಸವರಾಜನೇ।
ಅಱವನಿದಱಾದಿಯಂ ಕುವರಿಗಿಂತಾಯ್ತೆಂದು ಮಱುಗಿದರು ಸುಜನರ್ಕಳು ॥ ೨೧

ಆಸಱಿಂ ನಡೆದು ಬಹಿರುದ್ಯಾನದೊತ್ತಿನೊಳ।
ಗಾಸುತಂ ತತ್ಪುರುಷಮೂರ್ತಿಯಂ ನೋಡಿ ಪ।
ದ್ಮಾಸನೊಳಾಪರಬ್ರಹ್ಮಂ ನೆನೆದು ಕುಳ್ಳಿರಲು ಸಂದಾಯಿ ಸಾರ್ದು ॥
ಓಸಱಿಸಿ ಕರವನವನಿಯೊಳುರ್ದಿ ಖಂಡೆಯುವ।
ನಾಸುರದಿ ಜಡಿದು ಹೆಡತಲೆಗೆ ಮೋಹಿಸುತಿತ್ತು।
ಯಾಸುಭಟನಾರ್ದು ಸುಕುಮಾರಂಗೆ ಬಿನ್ನೈಸುತಿರ್ದನೇಂ ಬಣ್ಣಿಸುವೆನು ॥ ೨೨

ದೇವ ಚಿತ್ತೈಸಯ್ಯ ಪರಮಪಂಚಾಕ್ಷರಿಯ।
ನೀವು ಮಱೆಯದಿರಟ್ಟೆಯಿಂ ಪಱಿದು ತಲೆ ಬೀೞು।
ವಾವೇಳೆಯವಧಾನವೇ ಬೇಹುದದು ದೋಷಕರಿಪಂಚವದನವೆನಲು ॥
ಆವಚನಮಂ ಕೇಳ್ದು ನಸುನಗುತ್ತಲವೊ ಕೇ।
ಳೈ ವರ್ಣಪಂಚಕದ ಮಂತ್ರಮಂ ಮಱೆದಾದೊ।
ಡೇವೇಳೆಯಾವು ನುಡಿವವರಲ್ಲವೆನೆ ಜೀಯ ನುಡಿಯದಿರಲೇಕೆಂದನು ॥ ೨೩

ಶ್ರೀಮಂತ್ರಿಯೆನ್ನ ಪಿತನಾಜ್ಞೆಯಂ ಮನ್ನಿಸದೆ।
ತಾ ಮಡಿದನಯ್ಯನಾಣತಿ ನಿನ್ನ ಲೆಂಕತನ।
ವಾಮಾಟಿಚ್ಛೆಯಪ್ಪುದೆಂದೆಚ್ಚಱಿಸಲಲೆ ಜೀಯ ಹಾನಿಯೇಕಪ್ಪುದೆನ್ನ ॥
ಸ್ವಾಮಿಯ ನಿರೂಪಕ್ಕೆ ನನ್ನ ಭೃತ್ಯತೆಗೆಂದ।
ನೀಮಂತ್ರವಖಿಳಮೂಲಸ್ತಂಭವಿಂತಿದಱ।
ಸಾಮರ್ಥ್ಯದಿಂ ಖಡ್ಗ ಪುಟನೆಗೆವುದಲ್ಲದೊಡೆ ಪೂಮಾಲೆಯಪ್ಪುದೆಂದು ॥ ೨೪

ಆದೊಡೆಲೆ ಜೀಯ ನನ್ನೊಡೆಯನಾಜ್ಞೆಗೆ ಹಾನಿ ।
ಯೊದೊಡೇನೆನ್ನ ಭೃತ್ಯತೆ ಕೆಟ್ಟೊಡೇನಯ್ಯ ।
ಮಾದೇವನಂ ನೆನೆಯದಕಟ ! ಬಱಿಗಾಯದಿಂ ನೀನಱಿಯಲೇಕೆಂದೆನೆ ॥
ಗಾದ ಬೇಡಂತಾಗೆ ಮಂತ್ರಲಕ್ಷ್ಮಕನಾಮ ।
ವಾದುದಂ ಕೈಯೊಡನೆ ತೋರ್ಪೆನೆನಗೊಂದರಿದೆ ।
ಭೇದವೇ ಹೊಯ್ಯು ನೋಡೆನ್ನ ಸಾಮರ್ಥ್ಯಮಂ ಎಂದನಾಸಂದಾಯಿಯ ॥ ೨೫

ಅದೆಯದೆ ಮಹಾದೇವ ! ಹೊಯ್ದನಾ ಹೊಯ್ದನ ।
ಗ್ಗದ ಚೆಲ್ವ ಕುವರನಾ ತಲೆ ಬಿದ್ದುದಯ್ಯಯ್ಯ ।
ಮದನಾರಿ ಕೈಯ ಪಿಡಿಪಿಡಿ ನಿನ್ನ ರೂಪುದೋಱಿಂದಗಜೆಯಾಗಸದೊಳು ॥
ಒದಱಿ ಹೋ ಹೋ ! ತವಕವೇತಕೌ ಮುಂದೆ ಕಾ ।
ರ್ಯದ ನಿಷ್ಠೆಯುಂಟಬಲೆಯೆಂದು ಮಣಿಮಯವಿಮಾ ।
ನದೊಳಭವನಿರ್ದು ಸಂತೈಸೆ ಸಂದಾಯಿ ಖಡ್ಗವ ಹಿಡಿದು ಬೊಬ್ಬಿಱಿದನು ॥ ೨೬

ಹರಹರ ! ಮಹಾದೇವ ! ಹೊಡೆಯೆ ಕಂಧರಮುರಿದು ।
ಶಿರವಂಬರಕ್ಕೆ ಪುಟನೆಗೆಯೆ ಕುಂಡಲಿಯ ಪಿರಿ ।
ಯುರುಗನ ಫಣಾಮಣಿಪ್ರಭೆಯೊ ಹೃದ್ದೀಪಪ್ರಕಾಶವೋ ಎನಲಟ್ಟೆಯಿಂ ॥
ಸ್ಫುರಿಸಿ ರಕ್ತದ ಧಾರೆ ಪೊಣ್ಮೆ ಭೃತ್ಯಂ ವಾಮ ।
ಕರಮನೊಡ್ಡಲ್ಕಲ್ಲಿ ಮಂಡಿಸದೆ ಮಸ್ತಕಂ ।
ಭರದಿಂ ನಮಶ್ಶಿವಾಯೆಂದು ಪಂಚಾಕ್ಷರಿಯನಡಿಗಡಿಗೆ ಬಿಡದೊದಱಿತು ॥ ೨೭

ಅರರೆ ! ಹೊಡೆದೂರ್ಧ್ವಕಿಟ್ಟಾಯುಧಂ ಶಿವಪುರಕೆ ।
ಕರವಾಳೆನುತ್ತಾಗಲಾಗಸಕ್ಕೆದ್ದು ಶಂ ।
ಕರನ ಪಱಿಗೆಂದಿೞಿದ ಮಸ್ತಕಮನೆಡಗೈಯೊಳಾಂತು ದಕ್ಷಿಣಕರದೊಳು ॥
ಸ್ಫುರಿಪ ಖಂಡೆಯವಾಂತು ಪಂಚಾಕ್ಷರಿಯನೊದಱು ।
ವರಿದ ತಲೆಯಂ ಕಂಡು ಪುರಜನಂ ಪರಿಜನಂ ।
ಶರಣೆಂದು ಮಱುಗಿ ಕೀರ್ತಿಸುತಿರಲು ನೃಪಸಭೆಗೆ ಬಂದನಾಗಳ್ ಭೃತ್ಯನು ॥ ೨೮

ಕರದೊಳು ನಮಶ್ಶಿವಾಯೆಂಬ ತನ್ನೃಪಸುತನ ।
ಶಿರಗಾಣುತೆರ್ದೆ* ಬಿರಿದು ವಾದಿ ತಲ್ಲಣಿಸೆ ಭಾ ।
ಪುರೆಯೆಂದು ಪುರಜನಂ ಪೊಗೞೆ ಹರಹರವೃಘೇ ಜಾಳುಬೊಲ್ಲನೆ ಶರಣರು ॥

ಗಿರಿಜೆ ಗಣನಿಕರದಿಂ ಸುರದುಂದುಭಿಯೆ ಮೊಳಿಪ।
ಲರಲ ಸರಿಮಳೆಗಳಿಯಲುಜ್ಜುಗಿಸುವಮರರಿಂ।
ಪರಮೇಶನಾಗಸದೊಳೀಕ್ಷಿಸುತ್ತಿರೆ ಸಭೆಗೆ ಬಂದನಂದಾಭೃತ್ಯನು॥　　೨೯

ಬಾಳುದಲೆ ಸಹಿತ ನಡೆತಂದು ಭೃತ್ಯಂ ಶಿರವ।
ಚೋಳರಾಯನ ಬಲದ ಕಯ್ಗೆ ಕುಡೆ ಸಂಸಾರ।
ತೂಳದವಶಿಖಿಯೆನಿಪ ಕೇಶವಂ ಪಿಡಿದೆಡದ ಕರದೊಳಳವಡಿಸಿಕೊಂಡು॥
ಕೇಳು ಸಂದಾಯಿ ಪಂಚಾಕ್ಷರಿಯೊಳಿವನಸುವ।
ಮೇಳಿಸದೆ ನೀನಿದಿರೊಳಿಟ್ಟ ಮನದಿಂದ ಪೞು।
ದೇಳುತ್ತೆ ಮಂತ್ರಲಕ್ಷನ ಮಸ್ತಕಂ ಜಪಿಸುತಿದೆ ಪೊಡೆದ ಬಗೆವೇಳಿನೆ॥　　೩೦

ಮೂದಲೆಯ ಮಾತಾದುದಿನ್ನೇನು ದೇವ ನೀ।
ನಾದರಿಪುದೆನುತ ಕುವರನ ಕರೆದುಕೊಂಡು ತಾಂ।
ಹೋದುದನವಂ ಕುಳಿತುದಂ ತನ್ನ ನುಡಿಯುಸಾತನ ಮಾರ್ನುಡಿಯ ನಿಶ್ಚಯಾ॥
ಭೇದವಂ ತೋಱು ಸಂದಾಯಿ ಬೊಬ್ಬಿಡೆ ಸಭೆ ಮ।
ಹಾದೇವಯೆನಲಾರ್ದು ತನ್ನ ತಲೆಯಂ ಹೊಡೆದು।
ನಾದಿಸುತೆ ತನ್ನದೆಡಗಯ್ಯೊಳಾನಲು ಶಿರಂ ಪಂಚಾಕ್ಷರಿಯನೊದಱಿತು॥　　೩೧

ಕಡುಚೆಲ್ವಕುವರನಂ ಕೊಲ್ಲಲಾಱದೆ ಮಂತ್ರಿ।
ಮಡಿದನೈಸಲೆಯುರಸನಾಜ್ಞೆಯಂ ಮೀಱದಿಂ।
ದೊಡೆಯನ ನಿರೂಪದಿಂದಣುಗನಂ ತಲೆಯರಿದು ತನ್ನ ಶಿರವಂ ಭೃತ್ಯನು॥
ಪೊಡೆದು ಕೊಂಡನು ಭಾಪೆನುತ್ತ ಸಭೆ ಕೊಂಡಾಡೆ।
ನಡೆದಟ್ಟೆ ಮಸ್ತಕವ ನೃಪನ ಬಲಗೈಗೆ ಕೊ।
ಟ್ಟೆಡೆಯೊಳಾವೇಶದಿಂ ಘೋಷದಿಂದುಚ್ಚರಿಸಿತಮಮ! ಪಂಚಾಕ್ಷರಿಯನು॥　　೩೨

ನೋಡಿ ಕಲಿಭೃತ್ಯಶಿರವಂ ಗಣೇಶ್ವರರ ಕೊ।
ಡಾಡುವ ಕುಮಾರಮಸ್ತಕವಂ ಮಹೇಶ್ವರಂ।
ಗಾಡಿಯಿಂ ನುಡಿದನಂಗನೆ ನಿನ್ನ ಮಗನ ತಲೆಯೊಂದಕೆರಡೆಂದಿರಿಸಲು॥
ರೂಡಿಸಿದ ಕಲಿಗಣೇಶ್ವರನಂದು ದೀಕ್ಷೆಯಂ।
ಮಾಡಿ ಶಂಕರಗೊಱಿದ ಕರ್ಣಮಂತ್ರಂಗಳೋ।
ನಾಡೆ ಶಿವನೂರ ಸೂಱಿಯುಗೊಳುವ ಸೂಚನೆಗಳೆಸಲೆಸೆದುವಿಕ್ಕೆಲದೊಳು॥　　೩೩

ಎರಡುತಲೆ ನುಡಿವ ಮಂತ್ರಾನ್ಯತದಿನಲ್ಲಿ ಶಂ।
ಕರನ ತಲೆಗಸು ಬಂದು ಪಂಚಾಕ್ಷರಿಯನೊಡಱಿ।
ಯರಸುತನವೇ ಜೋಳ ಎನ್ನವನ ತಲೆಗೆಣೆಯಲ್ಲೈ ನಿನ್ನ ಮಗನ ರುಂಡ ॥
ವರಭೃತ್ಯನೇ ನಿನಗೆ ಸಂದಾಯಿ ಮನ್ಮಹೇ।
ಶ್ವರನವನ ತಲೆಗೆನ್ನ ತಲೆಯೆ ಪಡಿಯೆಂದರಿದು।
ತಿರುಕೊಳವಿನಾಚಿ ಮಡಗಿದರೆ ಮುತ್ತಲೆಯೊಡನೆಯೊದಱಿತ್ತು ಶಿವಮಂತ್ರವ ॥ ೩೪

ಆನಾರಿ ಭಕ್ತಂಗೆ ತಲೆಗುಡಲು ಬೋಧೆಯಿದು।
ತಾನೆನಗೆ ತಲೆಯೀವನೆಂದು ತರಿಸಲ್ಕಾ ಪ್ರ।
ಧಾನಿಯ ಶಿರಕ್ಕೆ ಯಸು ಬಂಡು ನಾಲ್ಪೆಸೆಗೆ ಕಳಸಂ ನಾಲ್ಕು ತಲೆ ನಡುವಣ ॥
ಜ್ಞಾನಿಶಂಕರನ ತಲೆ ಗುರುಕಳಶಮೆನ್ನ ತಲೆ।
ಯೀ ನವ್ಯಕಳಶಕ್ಕೆ ಕಾಣ್ಕೆಯೆಂದಾಜೋಳ।
ಭೂನಾಥನರಿದಿರಿಸಿದಂ ಮಂತ್ರದುಚ್ಚರಣೆಸಹಿತ ನಿಜಮಸ್ತಕವನು ॥ ೩೫

ಆಱು ತಲೆಗಳ ಕಂಡು ವಿೂತವಚನನಕ್ಕಟಾ।
ನೀಱನಂ ಕೊಂದವಂ ನಾಂ ಮಂತ್ರಲಕ್ಷ್ಮಂಗೆ।
ದೂಱು ಬಯಲಿಂಗಾಯ್ತು ಲೋಕಕ್ಕೆ ಯತಿಹಿತವನಪ್ಪ ಸತ್ಯೇಂದ್ರನಣುಗಂ ॥
ಬೇಱುಡಿಯೆನೆನಿಬರ್ಗೆ ಯೆನ್ನಹರಣವನಿಂದು।
ಮಾಱುವೆನೆನುತ್ತೆ ತನ್ನಯ ತಲೆಯನರಿದು ನಲ।
ವೇಱಿ ಪಂಚಾಕ್ಷರಿಯ ಘನಘೋಷಸಹಿತ ನಿಜಮಸ್ತಕವ ತಂದಿರಿಸಿದಂ ॥ ೩೬

ಹರನೊಡನೆ ಶಂಕರನ ಮನವೊಂದುತಲೆ ಮಂತ್ರಿ।
ವರನ ಸುಮಹೇಶನಿತ್ತಲೆ ಮಂತ್ರಲಕ್ಷ್ಮನೀ।
ಶ್ವರನ ಕೈಲಾಸಮಂ ಮುತ್ತಲೇ ಸಂದಾಯಿ ನಿರುತನಾಗುತಲೆ ಶಿವನ ॥
ತಿರುಕೊಳವಿನಾಚಿಯೈದುತಲೆ ಸತ್ಯದ ಸುಖವ।
ನರಸನುಱೆ ಬಯಸಿ ಬಾಯಾಱುತಲೆ ವಿೂತವಚನ।
ನುರು ಚಿದಂಬುಧಿಯತ್ತ ಮುಱುಗುತೇಱುತಲೆ ನಿಶ್ಚೈಸಿ ತಲೆಗಳ ಕೊಟ್ಟರು ॥ ೩೭

ರಾಣಿಯಂತಃಪುರದೊಳಿರ್ದು ಕೇಳ್ದಳು ಪಡಿಗೆ।
ಗೋಣನರಿದವರೆನಿಬರೆನೆ ತಾಯೆ ಚಿತ್ತೈಸು।
ಮೇಣು ಶಂಕರಗೆ ನಿನ್ನಣುಗನವರಮ್ಮಂಗೆ ಸಂದಾಯಿ ಪತಿವೋಹಿಗೆ ॥

ಕ್ಷೋಣೀಶ್ವರನ ಪಱಿದ ತಲೆ ಸಮದೊಳಿರ್ದಪುವು ।
ಕಾಣೆವಾಮಿತವಚನಮಸ್ತಕಕ್ಕೆಣೆಯನೆಂ ।
ದೇಣನಯನೆಯರು ಶಶಿಮುಖದಮೃತವತಿಗೆ ಬಿನ್ನವಿಸಲು ಯಥಾಸ್ಥಿತಿಯನು ॥ ೩೮

ಏಟುತಲೆಗಳ ಬಗೆಯ ಕೇಳುತಲಿ ನಡೆತರು ।
ತ್ತೇಟು ತಲೆಗಳ ಕಾಣುತಾಟುತಲೆ ಸಂತಸದೊ ।
ಳೇಟುತಲೆಗಳ ಕುಳಿರ್ಕೊಳುತಲೆ ಬರ್ದಿನಿಂದೇಟುತಲೆ ಚಿತ್ಭಾಂತಿಯ ॥
ಆಟುತಲೆ ಮೆಱೆಯುತಿರಲೇಟುತಲೆ ಮಂತ್ರಮಂ ।
ಪೇಟುತಲೆ ಬೋಧಿಸುತ್ತೇಟು ತಲೆ ರಾಜಿಸಲು ।
ಬಾಟುತಲೆಯೆನಲೊಪ್ಪುವೇಟುತಲೆಗಳ ಗುಣವನೀಟುತಲೆ ಸತಿ ನಿಂದಳು ॥ ೩೯

ಲೋಕವಱಿವಂತೆ ಸತ್ಯೇಂದ್ರಚೋಳನ ರಾಣಿ ।
ಯಾಕೆ ಮಿತವಚನನ ಶಿರಕ್ಕೆ ಪಟ್ಟಿಗೊಡದಿರ್ದ ।
ಳೇಕೆನ್ನರೇ ಶರಣರೆಂದು ನಿಶ್ಚೈಸಿ ಖಡ್ಗವ ಪಿಡಿದು ಜಡಿದು ನಿಂದು ॥
ಶ್ರೀಕಂಠನೊಡನೆ ಚಂಡಿಕೆ ಭೂಪನುನ್ನತಿಯ ।
ನೇಕಾಂತಮಂ ಮಾಡಲೆಳಸಿದಳೊ ಮುಕ್ತಿಯ ಮ ।
ಹಾಕವಾಟದ ಬೀಯಗದ ಕಯ್ಯೊ ಎನಲಮೃತವತಿ ಕೊರಲ್ಗವರಿಸುತ್ತ ॥ ೪೦

ವೀರದ ಪಗಲ್ಕೊಳಭೂರಮಣ ನಿಜಲಿಂಗ ।
ಧೀರಚಿಕ್ಕಯ್ಯ ಸುಕುಮಾರಚೀಲಾಳ ಗಂ ।
ಭೀರದಪ್ಪಣ್ಣಿಂಗಳಾರಾಮತಂದೆ ಜಂಬೂರ ಮಾಕಾಳದೇವ ॥
ಸಾರಗೋವಿಂದ ಭಟ್ಟಾರಕರ ಶಿವಕ್ಷೀರ ।
ಧಾರಾಭಿಷೇಕದಾಚಾರಬಂಕಣ್ಣಿಂಗ ।
ಳಾರಮ್ಯವಹ ಪಾದಸಾರಸಂಗಳ ನೆನೆಯುತಾರಾಣಿ ಶಿವನ ಭಜಿಸಿ ॥ ೪೧

ಪಱಿದಿರ್ದ ಕಂಠಸರವಂ ಪಡೆವ ಗುಣಿ ಕೊರ ।
ಲ್ಗೊಱಿಯುತಿರೆ ಕೈವಿಡಿದು ಕೆಂಜಡೆಯ ಪೆಱೆಯ ಬಾಂ ।
ಧೊಱೆದಲೆಯ ಸರ್ಪಕುಂಡಲದ ಪಣೆಗಣ್ಣ ಪೊಸಬಿಸಗೊರಲ ಪಂಚಮುಖದ ॥
ಮೆಱೆವರ್ಧದೇಹದಗಜೆಯ ಗಜಾಜಿನವಸನ ।
ದುಱುವ ದಶಭುಜದುಡೆಯ ಪುಲಿದೊವಲ ತೊಡವಿನೊ ।
ಳೆಱಕದಾಯುಧದ ಕಾಲ್ಗಣ್ಣ ನಂದಿಯನೇಱಿದ ಭವ ಪ್ರಸನ್ನನಾದಂ ॥ ೪೨

ಕೋಟಿಕಾಮರ ಗೆಲ್ವ ಶಂಭು ಮುಕ್ತ್ಯಂಗನೆಯ ।
ಬೇಟದವರಿಗೆ ಕುಸುಮಸರಗಳಂ ಕಱೆವಂತೆ ।
ಮಾಟಪ್ಪ ಶರಣರಿವದಿರು ಫಲಂಗಳ ಬಗೆವರಲ್ಲ ಪುಷ್ಪಂಗಳಿಪ್ಪ ॥
ಕೋಟಲೆಗಳೇಕೆ ಕೈಲಾಸದೊಳಗೆಂದು ಗಣ ।
ಕೂಟಂಗಳೆಯ್ದೆ ಚೆಲ್ಲಿದರೊ ಪೇೞೆನಲು ಶಶಿ ।
ಜೂಟಪ್ರಸನ್ನಕಾಲದೊಳು ಸುರದುಂದುಭಿಗಳೊದಱೆ ಪೂಮೞೆಗಱೆದುವು ॥ ೪೩

ಪೆಱೆದಲೆಯನಡಿಯನೋಲೈಸುತಿರ್ದರು ನಾಡೆ ।
ನಱುಗಂಪಿನಲರಂಬನಯ್ಯ ಬಿದಿಯುಮರ್ದುಂ*ಬ ।
ರೆಱೆಯ ದೆಸೆಯಾಣ್ಮರೆಲರ್ವ*ಟ್ಟಿಗರು ಕದಿರ್ಗ*ಱೆವ ಪೆಡೆಮಣಿಯ ಬಿಸದಳೆದರು ॥
ಉಱುವ ಭೇದದ ಬಟ್ಟೆಯುಱಿದ ಜತಿಗಳು ಸೊಬಗ ।
ಮೆಱೆವ ಸಗ್ಗದ ಚೆಲ್ವ ಸಱೆಮಿಂಡಿಯರು ಪಲ್ಲ ।
ಮಱೆವೊಗನ ಮಾದೇವಿಯೆಱಕದಱುವೊಗನೊಡನೆ ಕಱೆಗೊರಲನೊಪ್ಪಿರ್ದನು ॥ ೪೪

ಶ್ರೀನಂದಿನಾಥ ಭೃಂಗಿರಿಟಿ ವೀರೇಶ್ವರ ಮ ।
ಹಾನಂದಮುಖ್ಯಸತ್ಪ್ರಮಥರಿಂದಧಿಕ ರು ।
ದ್ರಾನೀಕದಿಂ ಪುರಾತನವರ್ಗದಿಂ ಸಿದ್ಧಸಾಧ್ಯರ ವಿಲಾಸದಿಂದೆ ॥
ತಾನೊಪ್ಪುತಿರ್ಪ ಸರ್ವೇಶ್ವರಂ ಸದ್ಭಕ್ತ ।
ಮಾನಿನಿಗೆ ಧರ್ಮಸಾಲೋಕ್ಯಾದಿಗಳೊಳಿಷ್ಟ ।
ಮೇನನಾದೊಡೆ ಕೊಡುವ ಕಾರುಣ್ಯದೇೞ್ಗೆಯಿಂ ಸವಿನುಡಿಯೊಳಿಂತೆಂದನು ॥ ೪೫

ಸತಿ ಕೇಳುವಾವಿನಿಬರೊಳಗೊರ್ವನಸುಗೆಯಾ ।
ಣತಿಯಿತ್ತವಮ್ಮ ನಿನಗಾರ್ ಬದುಕಬೇಕೆನಲು ।
ಪತಿಪುತ್ರಮುಖ್ಯರೞಿದಿರ್ದುದಂ ಲೆಕ್ಕಿಸದೆ ತಿರುಕೊಳವಿನಾಚಿಯಾತ್ಮ ॥
ಸುತಶಂಕರಂಗೆ ಹರಣವನೀಯೆ ದೇವ ನಮ ।
ಗತಿಶಯದ ಸುಖವಲಾ ಭಕ್ತಸಂತೋಷದು ।
ನ್ನತಿ ನಿಮ್ಮನಲ್ಲದೆಳಸೆವು ನಮಗೆ ಭೋಗಮೋಕ್ಷಗಳ ನಿಮ್ಮಡಿಯೆ ಸಾಕ್ಷಿ ॥ ೪೬

ಎಂದ ವನಿತೆಯ ನುಡಿಗೆ ಪರಿಣಮಿಸಿ ಮೊದಲಾತ ।
ನಿಂದಿನಿಬರೞಿಯಬೇಕಾಯ್ತು ತಾಂ ಬದುಕೆ ಮೇ ।
ಣ್ಪಿಂದೇೞ್ವರಿವರೆಣಿಸು ನೀನಬಲೆ ಶಂಕರನ ತಲೆ ಮೊದಲುಗೊಂಡು ॥

ಒಂದೆರಡು ಮೂಱು ನಾಲ್ಕೈದಾಱು ಕೂಡಲೇ ।
ಱಿಂದಮಾತ್ರದೊಳೇೞಲುಜ್ಜುಗಿಸಿ ಬೞಿಕ ಭೋ ।
ರೆಂದುಲಿವ ದೇವವಾದ್ಯಂ ಶರಣತತಿಜಯಧ್ವಾನಂಗಳುಂ ಮೊೞಗಿದುವು ॥ ೪೭

ಅಲ್ಲಲ್ಲಿ ಬಿರ್ದಟ್ಟೆಗಳು ನೋಡೆ ತಮತಮಗೆ ।
ಯುಲ್ಲಾಸದಿಂ ಬಂದು ತಲೆಗಳಂ ಕೈಯೆರಡ ।
ಱಲ್ಲಿ ಪಿಡಿದೆತ್ತಿ ನಿಜದೇಹದೇವಾಲಯದ ಹೃದಯಾಬ್ಜಪೀಠದೊಳಗೆ ॥
ಸಲ್ಲಲಿತಸತ್ಪ್ರಾಣಲಿಂಗಮಂ ಬಯ್ತು ಸ ।
ತ್ಫಲ್ಲದ ಶಿರಃಕಮಳಕೋಹಳಿಯಮರ್ಚಿದಂ ।
ತೆಲ್ಲರು ಮಹಾಮಸ್ತಕಂಬಡೆಯೆ ಗಣತತಿಯುಘೇ ಎಂದು ಕೀರ್ತಿಸಿದರು ॥ ೪೮

ಧರೆಗೆ ಶಿವಶಂಕರಂ ಸುಗುಣವಾರಿಧಿ ಮಂತ್ರಿ ।
ಯುರುದೋಷವನವಹ್ನಿ ಮಂತ್ರಲಕ್ಷ್ಮಂ ಭುವಿಯು ।
ಹರಣ ಸಂದಾಯಿ ಚಿದ್ವ್ಯೋಮ ಸತ್ಯೇಂದ್ರಚೋಳಂ ಚಂದ್ರವದನೆಯಪ್ಪ ॥
ತಿರುಕೊಳವಿನಾಚಿ ರವಿಕುಲದೀಪ ಮಿತವಚನ ।
ವರಮಾತೆಯಮೃತವತಿಯರು ಕೂಡೆ ಸಾಷ್ಟಾಂಗ ।
ವೆಱಗಿ ದಂಡಪ್ರಣಾಮವ ಮಾಡಿ ಕೀರ್ತಿಸುತ್ತಿರ್ದರು ಮಹಾದೇವನ ॥ ೪೯

ಜಯಜಯ ಗಿರೀಶ ಜಯಜಯ ಕೃಷ್ಣಗಳತೇಜ ।
ಜಯ ರುದ್ರದೋರ್ದಂಡ ಜಯ ಸುಚಿದ್ಘನಪಿಂಡ ।
ಜಯಜಯ ಜಗದ್ಗುರುವೆ ಜಯಜಯ ಪರಾತ್ಪರವೆ ಜಯ ಸರ್ವಭವನೆ ಶಿವನೆ ॥
ಜಯ ಮೃಡ ಮಹಾರಕ್ಷ ಜಯ ಹರಲಲಾಟಾಕ್ಷ ।
ಜಯ ಶಕ್ತಿನಿಜರೂಪ ಜಯ ದೇಶಿಕಾಲಾಪ ।
ಜಯ ಪಂಚಕೃತ್ಯಸಂಸ್ತುತ್ಯ ಯೆಂದಂ ಚೋಳರಾಯ ನೈರ್ಮಲ್ಯಕಾಯ ॥ ೫೦

ಅನಿತಕ್ಕೆ ನವರತ್ನಖಚಿತಪುಷ್ಪಕವೊಂಟು ।
ಕನಕಮಯಕೋಟಿಸೂರ್ಯಪ್ರಕಾಶಂಗಳಿಂ ।
ಘನಮಾರ್ಗದಿಂದಿೞಿದು ಬಂದೊಡವಱೊಳಗೆಯೋರೊರ್ವರಂ ಕುಳ್ಳಿರಿಸುತೆ ॥
ಮಿನುತದಿಕ್ಪಾಲಕರ ಮಕುಟಂಗಳೋ ಕದ್ರು ।
ವಿನ ಮಕ್ಕಳಷ್ಟಕುಲಭೋಗಿಗಳ ತಲೆರನ್ನ ।
ಮೆನಲುಚಿತವಲ್ಲೆಂಬ ಬೆಳಗಿಂದುಘೇ ಎನಲು ನೆಗೆದುವಾಗಸವಟ್ಟೆಗೆ ॥ ೫೧

ದೇವದುಂದುಭಿ ಮೊಱಗೆ ಗಿರಿಜೆಯ ಪಯೋಧರಂ ।
ತಾವೊಡನೆ ತೊಱಿಯೆ ತದಪಾಂಗದೊಳ್ ಮಿಂಚೆ ಕುಸು ।
ಮಾವಳಿಯ ವೃಷ್ಟಿಗಳ್ ಕಱಿಯೆ ಮುನ್ನೆಲ್ಲರರಿದೆನೆ ಬೆಳೆದ ಫಲದೊಟ್ಟಲು ॥
ತೀವಿ ಮಣಿರಥದೊಳಗವಶ್ಯದಿಂದಾರಂಭ ।
ದಾವಿಭುವೆನಿಪ್ಪ ಶಿವನಾಲಯಕೆ ಕೊಂಡುಯ್ದು ।
ಭಾವದಿಂ ಸರ್ವಲೋಕಂ ನಮಿಸೆ ಪುಷ್ಪಕಂ ಬಂದುನಾಕ್ಕೈಲಾಸಕೆ ॥ ೫೨

ಬಂದು ನಂದೀಶ್ವರನ ಬಾಗಿಲೊಳು ಧರ್ಮವತಿ ।
ಯಿಂದಲೇಟ್ಟಂದವರು ಪುಷ್ಪಕಂಗಳನಿೞದು ।
ಮುಂದ್ಯೆದೆ ಸಿಂಹಾಸನಾಸೀನನಾದ ಸರ್ವೇಶ್ವರನ ಸಭೆಯ ಪೊಕ್ಕು ॥
ನಿಂದೆಂಟು ಶಿಷ್ಟರಂ ತೆಗೆದು ಬಿಗಿಯುಪ್ಪುತಾ ।
ನಂದಿಸುತ ನಂದೀಶ ಭೃಂಗಿರಿಟೆ ವೀರಗಣ ।
ವೃಂದಕ್ಕೆ ಯುಮುರಗುಂಡದ ಮಲ್ಲಿಕಾರ್ಜುನಂ ತೋಱ ಪೊಗೞುತ್ತಿರ್ದನು ॥ ೫೩

ಶಿತಿಕಂಠಭಕ್ತ ಶಂಕರನಶ್ವದಿಂ ಮಡಿದ ।
ಕತದಿಂದ ಸಂದಾಯಿ ಪತಿಮೋಹಿ ಮಿತವಚನ ।
ರತಿನಿಷ್ಠೆಯಿಂ ಮಡಿಯೆ ಪೞಗೆ ಪೞಯಾ ಮಂತ್ರಲಕ್ಷ್ಮಿತಿರುಕೊಳವಿನಾಚಿ ॥
ನುತಚೋಳ ತಱದ ತಲೆ ಪಂಚಾಕ್ಷರಿಯನೊದಱಿ ।
ಮೃತವಾಗುವಮೃತವತಿಗೊಲಿದು ಬೇಡೆನಲಾಪ್ತ ।
ತತಿಯುಱದು ನನ್ನವನ ಬಯಸಿದಳು ನೋಡಿವರ ಗಣನಿಕರವೆಂದನಭವಂ ॥ ೫೪

ನೋಡಯ್ಯ ನಂದೀಶ ಧರ್ಮವತಿಯಾಣ್ಮನಂ ।
ನೋಡು ಭೃಂಗೀಶ ಪತಿಮೋಹಿಯಂ ವೀರೇಶ ।
ನೋಡು ಸಂದಾಯಿಯಂ ಮಿತವಚನನಂ ಮಂತ್ರಲಕ್ಷ್ಮನಂ ಶಂಕರನನು ॥
ನೋಡು ಗಣಪಸ್ಕಂಧ ವುಪಮನ್ಯುಗಳು ನೀವು ।
ನೋಡಿ ತಿರುಕೊಳವಿನಾಚಿಯುನಮೃತವತಿಯ ಕೊಂ ।
ಡಾಡಿರೇ ಗಂಗೆ ಗೌರಿಯರೆಂದು ತೋಱ ವೈಭವದಿಂದೆ ಶಿವನೊಪ್ಪಿದಂ ॥ ೫೫

ಅಮೋಷಮುಖನಮಿತವೀರವೃಷಭಪ್ರಿಯಂ ।
ಶ್ರೀಮಿಥುನರಪ್ಪ ಕಿನ್ನರನಾಯಕರ್ ಕಟಕ ।
ಧಾಮರುಱಿ ಪಾಡುತಿರೆ ಸಿಂಹಮಧ್ಯದ ಕನ್ನೆಯರು ತೋಳ್ಗಳುಂ ತೊನೆಯಲು ॥

ಚಾಮರವನಿಜೆ ವೃಶ್ಚಿಕಧ್ವಜಂ ಧನುವಿಡಿದು ।
ನಾಮಕರನಾಗಿ ಸೇವಿಸೆ ಕುಂಭ ಕುಚಮೀನ ।
ಕೋಮಲಾಕ್ಷಿಯರಪ್ಪ ಸಿದ್ಧವನಿತೆಯರು ಜಯವಿಡೆ ದಯಾರಾಶಿ ಮೆಱೆದಂ ॥ ೫೭

ಮೆಱೆವ ತಣ್ಗದಿರ್ಗ*ಲ್ಲ ಮಂಟಪದೊಳಮರ್ದುಂ*ಬ ।
ರೆಱೆಯ ಮೊದಲಾದವಳ ಸಱಿಮಿಂಡಿಯರ್ಕಳಿಂ ।
ದುಱುವ ಸಂಭ್ರಮದೆ ಕುಳಿರ್ವ*ಟ್ಟಣಾಗಿಯೊಡನೆ ಪಸೆನಿಂದು ಕೆಂಬರಲ ತಲೆಯ ॥
ಮುಱಿವಾವಿನುಂಗುರದ ಕೈನೀಡೆ ಕಂಡಂಜು ।
ತಿರದೆ ಶಿವಯೆಂದು ಗಂಡನ ಪೆಸರೆನುತ್ತೆ ತಲೆ ।
ಯೆಱಗಿ ನಾಣ್ಚಿದ ಸತಿಯ ನೋಡಿ ನಸುನಗುವ ಗಂಗಾಧರಂ ಸಲಹುಗೆಮ್ಮಂ ॥ ೫೮

ಬಾಣಗುಣವಾರ್ಧಿವಿಧು ಸಂದ ಶಕವರ್ಷದಿಂ ।
ಮೇಣಮಲಸತ್ಸರಂ ಶ್ರೀಮುಖಂ ಕಾರ್ತಿಕ ಧು ।
ರೀಣವಹ ಶುದ್ಧಸಪ್ತಮಿ ಶುಕ್ರುವಾರವಾಶ್ರವಣನಕ್ಷತ್ರದಲ್ಲಿ ॥
†ಜಾಣನಾನಾಗಲಿಂಗಾಹ್ವಯಸುತಂ ಶಿವ ।
ಪ್ರಾಣಲಿಂಗಪ್ಪನಾತ್ಮಜ ಚೇರಮಾಂಕಗ ।
ಕ್ಷೀಣವೆನೆ ಮಲ್ಲಣಾರ್ಯಂ ನಿರೂಪಿಸಿದನೀ ಭಾವಚಿಂತಾರತ್ನಮಂ ॥ ೫೯

ಶ್ರೀಮುಖಾಬ್ದದೊಳಿದು ಸಮಾಪ್ತಿಯಾಯಿತ್ತಿದಂ ।
ಪ್ರೇಮದಿಂದೋದಿದೊಡೆ ಭಾವಮುಂ ಪ್ರಾಜ್ಞರ ಮ ।
ಹಾಮನಸ್ಸಿಂಗೀವ ಧಾತುಲಕ್ಷಣಗಳುಂ ಟೈಶ್ವರಂ ಬಹುಧಾನ್ಯದ ॥
ಸಾಮಗ್ರಧನರಾಜಿಯಾದಿವೈಭವಗಳಂ ಜನ ।
ಸ್ತೋಮಕ್ಕೆ ತಾಂ ಶತಾಯುರ್ವೈಪುರುಷವಜ ।
ಪ್ರಾಮಾಣ್ಯದಾಯುವಂ ಭುಕ್ತಿಯಂ ಮುಕ್ತಿಯುಂ ಕುಡುವನಗಜಾರಮಣನು ॥ ೬೦

ಶರಣರ ಕೃಪಾಮೃತದ ವರುಷದೊಳಗಿಳೆಯಲ್ಲಿ ।
ಸುರಭಿಗಳ್ ಕಱೆಯಲಿ ಶಿವಪ್ರಸಾದೇಚ್ಛುಕರ ।
ಕರುಣದೆ ಸುಭಿಕ್ಷಂಗಳೊದವತಿ ಸಮಸ್ತಜನಮಖಿಲಸುಖದಿಂ ಬಾಳಲಿ ॥

---

†ಜಾಣೆನಿಂನಾಗಲಿಂಗಯ್ಯಗಳಸುತ ಶಿವ ।
ಪ್ರಾಣಗಂಗಪ್ಪನಣುಗಂ ಚೇರಮಾಂಕಗ ।
ಕ್ಷೀಣವೆನೆ ಮಲ್ಲಣಾಚಾರ್ಯಂ ನಿರೂಪಿಸಿದ ಭಾವಚಿಂತಾರತ್ನಮಂ॥ ಎಂದು ಪಾಠಾಂತರ

ವರನೃಪರು ಧರ್ಮಶಿವಭಕ್ತಿಯಿಂದಾಳಲು ।
ರ್ವರೆಯಲ್ಲಿ ಭಾವಚಿಂತಾರತ್ನ ವಿನಚಂದ್ರ ।
ರಿರುವ ವರೆಗೆಲ್ಲಾ ಮಹೇಶ್ವರರು ಲಾಲಿಸಲಿ ಪಾಲಿಸಲಿ ಕೊಂಡಾಡಲಿ ॥ ೬೦

ಪಾಹಿ ಮಹಿಮಾಸ್ಥಾನ ಪಾಹಿ ಭವಗುಣಲೂನ ।
ಪಾಹಿ ಜಯ ಜಿತಕಾಮ ಪಾಹಿ ಗಿರಿಜಾರಾಮ ।
ಪಾಹಿ ಚಿದ್ಘನರಾಶಿ ಪಾಹಿ ಸತ್ಯತಕಾಶಿ ಪಾಹಿ ದೇವಾ ಸುಭಾವ ॥
ಪಾಹಿ ನಿರ್ಮಲಕಾಯ ಪಾಹಿ ನಿಗಮಾಜ್ಞೇಯ ।
ಪಾಹಿ ಪಂಚಾಕ್ಷರೀರೂಪ ಜಯ ನಿಷ್ಪಾಪ ।
ಪಾಹಿ ಯೆಮ್ಮಮರಗುಂಡದ ಮಲ್ಲಿನಾಥ ಶಿವಮಸ್ತು ಶುಭಮಸ್ತು ಸತತಂ ॥ ೬೧

ಮನುಸಂಭವಾಗ್ರದಶನೀಪರಾಜಿನ ಚೋಳ ।
ಕನದಲಘುಚರಮಹಾಸಿದ್ಧಿಮುಖಕಮಲಾಭಿ ।
ಜನಪುಂಡರೀಕ ವಾಮಾರ್ಧೋಹದೋದ್ಭೂತಮಹನೀಯಮಾನಸಿಸ್ಥಿತ ॥
ಘನಭಾರಶತಕೋಟಿಕೋಟಿತೇಜೋವಿರೋ ।
ಚನ ಭೂವರಾನಂತಸನ್ನಯಸುವಿಶ್ವ ತುಂಡ ।
‡ಜನಿತೋಸ್ರಮಾಲಿಯೆನಿಪಮರಗುಂಡದ ಮಲ್ಲಿನಾಥ ರಕ್ಷಿಪುದೆಮ್ಮನು ॥ ೬೨

ಇದು ಸಕಲಭಕ್ತಪದಪಂಕೇಜರೇಣುಮ ।
ಸ್ತದ ಮಲ್ಲಣಾರ್ಯನಾಚೇರಮಾಂಕಂಗೆ ಬೆಸ ।
ಸಿದ ಭಕ್ತಸತ್ಯೇಂದ್ರಚೋಳಕೃತಿ ಭಾವಚಿಂತಾರತ್ನ ಮಮಳಕರ್ಣ ॥
ಹೃದಯಮಸ್ತಕವದನಸರ್ವಾಂಗಸೌಖ್ಯಕಾ ।
ಸ್ಪದವಖಿಳಸುಜನರ್ಗೆ ಪಂಚಾಕ್ಷರಿಯ ಮಹ ।
ತ್ವದ ಬೋಧೆಯಿಂದೋದಿದೊಡೆ ಕೇಳಿದರಿಗಿಷ್ಟಸಿದ್ಧಿ ಸರ್ವರಿಗಪ್ಪುದು ॥ ೬೩

ಒಂಬತ್ತನೆಯ ಸಂಧಿ ಮುಗಿದುದು.

**ಭಾವಚಿಂತಾರತ್ನಕೃತಿ ಸಂಪೂರ್ಣಂ.**

———:0:———

---

‡ಜನಿಕೋಶಪ್ರಮಾಲಿ ಎಂದು ಪಾಠಾಂತರಂ.